# ಭಾರತ ಸಂವಿಧಾನ

## ಪ್ರಸ್ತಾವನೆ

ಭಾರತದ ಜನತೆಯಾದ ನಾವು ಭಾರತವನ್ನು
ಸಾರ್ವಭೌಮ ಸಮಾಜವಾದಿ
ಮತಧರ್ಮ ನಿರಪೇಕ್ಷ ಜನತಂತ್ರಾತ್ಮಕ
ಗಣರಾಜ್ಯವನ್ನಾಗಿ ರೂಪಿಸುವುದಕ್ಕಾಗಿ
ಭಾರತದ ಎಲ್ಲ ನಾಗರಿಕರಿಗೆ
ಸಾಮಾಜಿಕ, ಆರ್ಥಿಕ, ರಾಜಕೀಯ ನ್ಯಾಯ
ವಿಚಾರ, ಅಭಿವ್ಯಕ್ತಿ, ನಂಬಿಕೆ, ಧರ್ಮ ಮತ್ತು
ಉಪಾಸನೆಯ ಸ್ವಾತಂತ್ರ್ಯ
ಸ್ಥಾನಮಾನ, ಅವಕಾಶಗಳ ಸಮತೆ
ದೊರೆಯುವಂತೆ ಮಾಡುವ,
ವ್ಯಕ್ತಿಗೌರವ, ದೇಶದ ಏಕತೆ ಮತ್ತು ಸಮಗ್ರತೆಗಾಗಿ
ಎಲ್ಲರಲ್ಲಿ ಭ್ರಾತೃತ್ವ ಭಾವನೆ ಮೂಡಿಸುವ
ದೃಢ ಸಂಕಲ್ಪ ಮಾಡಿ
ನಮ್ಮ ಸಂವಿಧಾನ ಸಭೆಯಲ್ಲಿ
1949ರ ನವೆಂಬರ್ 26ನೇ ದಿನದಂದು
ಈ ಸಂವಿಧಾನವನ್ನು ನಮಗೆ ನಾವೇ
ಅರ್ಪಿಸಿಕೊಂಡು ಅಂಗೀಕರಿಸಿ, ಶಾಸನವಾಗಿ
ವಿಧಿಸಿಕೊಂಡಿದ್ದೇವೆ



ಕರ್ನಾಟಕ ಗಾಂಧಿ
ಸ್ಮಾರಕ ನಿಧಿ

**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಇಂದಿರಾ ಕೃಷ್ಣಪ್ಪ**

Editor :
**Indira Krishnappa**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**CreativeGeekZ**
Yadhava College Road,
Madhavanagara, Bengaluru - 560001
Ph : +91 80 40927049
E-mail : mail@creativegeekz.com



Design : **Ujwal Creations**, Bangalore

ರೂ. 28/– **BAPU PRAPANCHA**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಬಾಪು ಪ್ರಪಂಚ

ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–04 • ಸಂಚಿಕೆ–12 • ಮೇ 2023



ಹಿಂದಿನ ರಕ್ಷಾಪುಟ : ಎಂ ಎಸ್ ಮೂರ್ತಿ




ಏಪ್ರಿಲ್ ತಿಂಗಳ ಬಾಪೂ ಪ್ರಪಂಚ ಸಂಚಿಕೆ ವೈವಿಧ್ಯಮಯವಾಗಿದೆ. ಬಾಪೂರವರ ಬಹುಮುಖ ಪ್ರತಿಭೆಯಲ್ಲಿ ಒಂದಾದ ಅವರ ಪತ್ರಕರ್ತ ಪ್ರವೃತ್ತಿಯನ್ನು ಬಹಳ ಚೆನ್ನಾಗಿ ಬಣ್ಣಿಸಿದೆ. ದಕ್ಷಿಣ ಆಫ್ರಿಕಾದ ವರ್ಣಭೇಧ ನೀತಿಯ ವಿರುದ್ಧದ ಹೋರಾಟದಲ್ಲಿ ಮತ್ತು ಭಾರತ ಸ್ವಾತಂತ್ರ್ಯ ಚಳವಳಿಯಲ್ಲಿ ಗಾಂಧೀಜಿ ಪತ್ರಿಕೆಗಳನ್ನು ಹೇಗೆ ಸಮರ್ಥವಾಗಿ ಬಳಸಿ ಕೊಂಡರು ಎನ್ನುವುದರ ಚಿತ್ರಣ ಸೊಗಸಾಗಿ ಮೂಡಿ ಬಂದಿದೆ. ಭಾರತದ ಇಂದಿನ ಮಾಧ್ಯಮಗಳಿಗೆ ಗಾಂಧೀಜಿಯವರ ಪತ್ರಕರ್ತ ಮೌಲ್ಯಗಳು ಮಾರ್ಗದರ್ಶಿಯಾಗ ಬೇಕೆಂಬುದು ನನ್ನ ಬಯಕೆ .

**ನೇತಾಜಿ ಗಾಂಧಿ,** ಬೇನಾಲ್ ಗ್ರಾಮ, ಬಾಗಲಕೋಟೆ

* * *

ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಬಾಪೂ ಪ್ರಪಂಚ ಪ್ರಕಟಿಸಿರುವ ಗಾಂಧೀಜಿ ಮತ್ತು ಅಂಬೇಡ್ಕರ್ ಲೇಖನಗಳು ಅರ್ಥಪೂರ್ಣವಾಗಿವೆ .

ದೇವನೂರು ಮಹಾದೇವ ಅವರ ಎದೆಗೆ ಬಿದ್ದ ಅಕ್ಷರ ಕೃತಿಯಿಂದ ಆಯ್ದ ' ಗಾಂಧಿ – ಅಂಬೇಡ್ಕರ್ ಒಂದಿಷ್ಟು ಮಾತು ' ಕಿರು ಲೇಖನ ಸಮಯೋಚಿತವಾಗಿದೆ.

ಗಾಂಧಿ ಮತ್ತು ಅಂಬೇಡ್ಕರ ಅವರ ನಡುವೆ ಭಿನ್ನಾಭಿಪ್ರಾಯ ಹುಡುಕುವ ಇಂದಿನ ಕೆಲವು ಜನರು ದೇವನೂರು ಮಹಾದೇವ ಅವರ " ಗಾಂಧಿ ಮತ್ತು ಅಂಬೇಡ್ಕರ್ ಅವರು ನಮ್ಮ ಎರಡು ಕಣ್ಣುಗಳಿದ್ದಂತೆ " ಎನ್ನುವ ಮಾತುಗಳನ್ನು ಸದಾ ಮೆಲುಕು ಹಾಕಬೇಕು . ಭಾರತದ ಜನರನ್ನು ಅವರಿಬ್ಬರಷ್ಟು ಪ್ರೀತಿಸಿದವರು ಮತ್ತು ಭಾರತೀಯರ ಉನ್ನತಿಗೆ ಶ್ರಮಿಸಿದವರು ಭಾರತದ ಚರಿತ್ರೆಯಲ್ಲಿ ಬೇರಾರೂ ಇಲ್ಲ.

**ಜಿ ಬಿ ಶಿವರಾಜ್, ಗಾಂಧಿ ಬಳಗ**

* * *

ಇತ್ತೀಚಿನ 'ಬಾಪೂ ಪ್ರಪಂಚ' ಸಂಚಿಕೆಗಳು ಸೊಗಸಾಗಿ ಬರುತ್ತಿವೆ. ಇವುಗಳನ್ನು ಕರ್ನಾಟಕದಾದ್ಯಂತ ಜನರಿಗೆ ತಲುಪಿಸುವ ಕಾರ್ಯ ಆಗಬೇಕು. ಇಲ್ಲದಿದ್ದರೆ ಸುಂದರವಾದ ಹಾಗೂ ಮಾಹಿತಿಪೂರ್ಣವಾದ ಈ ಸಂಚಿಕೆಗಳನ್ನು ಜನರಿಂದ ವಂಚಿಸಿದಂತೆ ಆಗುತ್ತದೆ.ಗಾಂಧಿ ವಿಚಾರಗಳನ್ನು ಯುವಜನತೆಗೆ ತಲುಪಿಸಲು ಇದು ಸಾಧನವಾಗಲಿ ಎನ್ನುವ ಆಶಯ ನನ್ನದು.

**ಡಾ. ಸುಜಯ್ ಕುಮಾರ್**

ಸರ್ವೋದಯ ಕಾರ್ಯಕರ್ತರು, ಶ್ರೀರಂಗಪಟ್ಟಣ




**ಪ್ರಿಯರೆ,**

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತ ಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

ಮುದ್ರಿತ ಸಂಚಿಕೆಯ ಜೊತೆಗೆ ಈ ಸಂಚಿಕೆಗಳನ್ನು ಡಿಜಿಟಲ್ ರೂಪದಲ್ಲಿ ಸಹ ಪ್ರಸಾರ ಮಾಡಲಾಗುತ್ತಿದೆ. ಅಸಕ್ತರು ಈ ಸಂಚಿಕೆಗಳನ್ನು ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು gandhi.sanchaya.net ಜಾಲತಾಣದಲ್ಲಿ ವೀಕ್ಷಿಸಿ.

**ಪತ್ರಿಕೆಗೆ ಚಂದಾದಾರರಾಗಲು ಆಸಕ್ತಿ ಇರುವವರು ವಾರ್ಷಿಕ 250 ರೂಗಳ ಚಂದಾ ಪಾವತಿಸಿ ವಿಳಾಸ ಕಳುಹಿಸಿದರೆ ಅವರಿಗೆ ಅಂಚೆ ಮೂಲಕ ಪತ್ರಿಕೆಯನ್ನು ಕಳುಹಿಸಲಾಗುವುದು.**

ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :
**ಗೌರವ ಕಾರ್ಯದರ್ಶಿ**
ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಗಾಂಧಿ ಭವನ, ಬೆಂಗಳೂರು –560001
080 22261967 / 9738605799 । gandhibhavanabengaluru@gmail.com






# ಗಾಂಧಿ ಮತ್ತು ಎಡಪಂಥ

**ಕಮ್ಯೂನಿಸ್ಟ್ ಪಕ್ಷದ ಸಂಸ್ಥಾಪಕ ಹಾಗೂ ವಿಶ್ವಚಿಂತಕ ಕಾರ್ಲ್ ಮಾರ್ಕ್ಸ್ ಮೇ 5, 1818 ರಂದು ಜರ್ಮನಿಯಲ್ಲಿ ಜನಿಸಿದರು. ಖ್ಯಾತ ತತ್ವಜ್ಞಾನಿ ಕಾರ್ಲ್ ಮಾರ್ಕ್ಸ್ ಅವರ ಚಿಂತನೆಗಳ ಕೃತಿ 'ದಾಸ್ ಕ್ಯಾಪಿಟಲ್' ಶ್ರಮಿಕ ವರ್ಗಕ್ಕೆ ಪವಿತ್ರ ಗ್ರಂಥ. ಭಾರತದಲ್ಲಿಯೂ ಮಾರ್ಕ್ಸ್ ಚಿಂತನೆಗಳ ಎಡ ಪಂಥಿಯರಿದ್ದಾರೆ. ಕೆಲವು ರಾಜ್ಯಗಳಲ್ಲಿ ಎಡಪಂಥಿಯ ನಿಲುವಿನ ಸರ್ಕಾರಗಳೂ ಇವೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕಮ್ಯುನಿಸ್ಟ್ ಪಕ್ಷ ತನ್ನದೇ ಆದ ಪ್ರತ್ಯೇಕ ನಿಲುವನ್ನು ಹೊಂದಿತ್ತು. ಗಾಂಧೀಜಿ ಜೊತೆ ಎಡಪಂಥದ ಒಲವು ನಿಲುವುಗಳ ಬಗ್ಗೆ ಒಂದು ಪುಟ್ಟ ಚಿಂತನೆ ಇಲ್ಲಿದೆ**

– ಅರವಿಂದ ಚೊಕ್ಕಾಡಿ

**ಗಾಂ**ಧಿ ಮತ್ತು ಎಡಪಂಥ ಎರಡನ್ನೂ ಒಟ್ಟಿಗೇ ಇರಿಸಿಕೊಳ್ಳುವ ಹಲವರ ಪ್ರಸ್ತಾವನೆಯ ಬಗ್ಗೆ ಬಹಳ ಯೋಚಿಸಿದ್ದೇನೆ. ಪ್ರಾಯಶಃ ಅದು ಎಂದೂ ಸಾಧ್ಯವಾಗಲಾರದು. ರಾಜಕೀಯ ಸಾಮರಸ್ಯ ಸಾಧ್ಯ ಇದೆ. ಅದನ್ನು ಇಲ್ಲವೆನ್ನುವುದಿಲ್ಲ. ಪ್ರಬಲ ಕಾಂಗ್ರೆಸ್ ಅನ್ನು ಅಧಿಕಾರದಿಂದ ದೂರವಿಡಲಿಕ್ಕಾಗಿ ಹಿಂದೂ ಮಹಾ ಸಭಾ ಮತ್ತು ಮುಸ್ಲಿಂ ಲೀಗ್ ನಡುವೆಯೂ ಒಮ್ಮೊಮ್ಮೆ ಅನುಕೂಲ ಸಿಂದು ರಾಜಕೀಯ ಸಾಮರಸ್ಯ ಸಾಧ್ಯವಾಗಿದೆ. ಅದರರ್ಥ ತಾತ್ವಿಕವಾಗಿ ಹಿಂದೂ ಮಹಾ ಸಭಾ ಮತ್ತು ಮುಸ್ಲಿಂ ಲೀಗ್ ಹೊಂದಿಕೊಳ್ಳುತ್ತವೆ ಎಂದಲ್ಲ.

ಗಾಂದೀಜಿ ಮೌಲ್ವಿಗಳೊಂದಿಗೆ, ಕ್ರೈಸ್ತ ಪಾದ್ರಿಗಳೊಂದಿಗೆ ಎಡೆಬಿಡದೆ ಸಂವಾದ ಮಾಡುತ್ತಿದ್ದರು. ಮತಾಂತರ ಆಗಲಿಕ್ಕೂ ಅವರಿಗೆ ವಿಶೇಷ ಆಹ್ವಾನವಿತ್ತು. ಗಾಂಧಿಯವರ ವೃತ್ತಿ ಜೀವನದುದ್ದಕ್ಕೂ ಅವರಿಗೆ ನೆರವಾದವರು ಮುಸ್ಲಿಮರು. ಆದರೆ ಆಗಲೂ ಗಾಂಧಿ ನಾನು ಮುಸ್ಲಿಮರ ಆಪ್ತ ಮಿತ್ರನೇ ಹೊರತು ಮುಸ್ಲಿಂ ಅಲ್ಲ ಎಂದೇ




ಹೇಳಿದ್ದಾರೆ. " ನಾನೊಬ್ಬ ಸನಾತನಿ ಹಿಂದೂ. ಆದ್ದರಿಂದಲೇ ನಾನು ಏಕಕಾಲಕ್ಕೆ ಮುಸ್ಲಿಮನೂ ಆಗಬಲ್ಲೆ, ಕ್ರೈಸ್ತನೂ ಆಗಬಲ್ಲೆ" ಎನ್ನುವ ಗಾಂಧಿಯವರ ಮಾತಿನಲ್ಲಿ ಅವರು ನಿಂತಿರುವ ನೆಲೆ ಹಿಂದೂ ಧರ್ಮವೇ ಎನ್ನುವುದರಲ್ಲಿ ಯಾವ ಅನುಮಾನವೂ ಉಳಿಯುವುದಿಲ್ಲ. "ಆದ್ದರಿಂದಲೇ ನಾನು ಮುಸ್ಲಿಮನೂ ಆಗಬಲ್ಲೆ..." ಎನ್ನುವಲ್ಲಿ ನೀನೂ ಬಾ ನೀನೂ ಬಾ ಎಂದು ಕರೆದುಕೊಳ್ಳುವ ಶಕ್ತಿಯೂ ಹಿಂದೂ ಧರ್ಮಕ್ಕೆ ಇದೆ ಎಂದೇ ಗಾಂಧಿ ಹೇಳುತ್ತಿರುವುದು ಸ್ಪಷ್ಟವಿದೆ.

ಎಲ್ಲವನ್ನೂ ಒಳಗೊಳಿಸಿಕೊಳ್ಳುವುದು ಹಿಂದೂ ಧರ್ಮದ ಗುಣವೂ ಹೌದು. ಗಾಂಧಿಯ ಗುಣವೂ ಹೌದು. ಎಡಪಂಥೀಯರು ನಮ್ಮವರೇ ಅವರು, ಭಾರತೀಯ ಎಡಪಂಥೀಯರು ಎಂದು ಗಾಂಧಿ ಹೇಳುತ್ತಾರೆ. ಆದರೆ ಎಡಪಂಥೀಯರ ಕಛೇರಿಯಲ್ಲಿ ಗಾಂಧಿಯ ಫೋಟೊ ಇರುವುದಿಲ್ಲ. ಸಾವರ್ಕರ್ ಪ್ರತಿಭಾಶಾಲಿ. ಅವರಿಗೆ ಉನ್ನತ ಹುದ್ದೆ ಕೊಡಬೇಕು ಎಂದು ಗಾಂಧಿ ಬರೆಯುತ್ತಾರೆ. ಆದರೆ ಸಾವರ್ಕರ್ ಒಂದು ಕಡೆ ಸ್ವಾತಂತ್ರ್ಯಕ್ಕೆ ಗಾಂಧಿ ಬೇಕಾಗುತ್ತಾರೆ ಎನ್ನುವುದನ್ನು ಬಿಟ್ಟರೆ ಗಾಂಧಿಯ ಬಗ್ಗೆ ಮೆಚ್ಚುಗೆಯನ್ನು ಹೇಳುವುದಿಲ್ಲ. ಹಾಗೆ ನೋಡಿದರೆ ಗಾಂಧಿಯನ್ನು ವಿರೋಧಿಸಿಯೂ ಒಂದಷ್ಟು ಒಳ್ಳೆಯ ಮಾತು ಆಡಿದವರು ಅಂಬೇಡ್ಕರರೇ. ಏಕೆಂದರೆ ಬೇರೆ ಯಾವುದರಲ್ಲಿ ಅಲ್ಲದಿದ್ದರೂ ಅಹಿಂಸೆಯಲ್ಲಿ ಗಾಂಧಿ ಮತ್ತು ಅಂಬೇಡ್ಕರ್ ಒಂದಾಗುತ್ತಾರೆ.

ಗಾಂಧಿಯೊಂದಿಗೆ ಸೇರಬಲ್ಲ ಏಕೈಕ ಆಧುನಿಕ ಜ್ಞಾನ ಶಾಖೆ ಲೋಹಿಯಾ ವಾದ. " ದೇವರನ್ನು ನಾನು ಕಂಡಿಲ್ಲ. ಹೆಣ್ಣನ್ನು ಬಲ್ಲವನಲ್ಲ. ಆದರೆ ಇಬ್ಬರನ್ನೂ ಒಬ್ಬನಲ್ಲೆ ಕಂಡೆ; ಅವರೇ ಗಾಂಧಿ" ಎಂದವರು ಲೋಹಿಯಾ. ಗಾಂಧಿ ಚಿತಾಭಸ್ಮ ಇದ್ದ ವಾಹನಕ್ಕೆ ನೆಹರು ಚಪ್ಪಲಿ ತೆಗೆಯದೆಯೇ ಹತ್ತಿದಾಗ ಸಿಟ್ಟಿಗೆದ್ದು ಲೋಹಿಯಾ ಹಿಗ್ಗಾ ಮುಗ್ಗಾ ಝಾಡಿಸ್ತಾರೆ. ಅಂದರೆ ಈ ದೇಶದ ಪರಂಪರೆಯ ಬಗ್ಗೆ ಲೋಹಿಯಾ ಅವರಿಗೆ ಗೌರವ ಇದೆ. ಗಾಂಧಿಗೂ ಇದೆ. ಆದ್ದರಿಂದ ತಾತ್ವಿಕ ಹೊಂದಾಣಿಕೆಯೇ ಸಾಧ್ಯ. ಇಲ್ಲಿ ಸಮಸ್ಯೆ ಇರುವುದು ಲೋಹಿಯಾವಾದವಲ್ಲ. ಲೋಹಿಯಾ ವಾದಿಗಳು. ಅವರು ತಮ್ಮ ನಿಲುವಿನಲ್ಲಿ ಸ್ಥಿರತೆಯನ್ನು ಹೊಂದಿರುವುದಿಲ್ಲ. ಆದ್ದರಿಂದ ಲೋಹಿಯಾ ವಾದವನ್ನು ರಕ್ಷಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಎಡಪಂಥೀಯರು, ಅಂಬೇಡ್ಕರ್ವಾದಿಗಳೆಲ್ಲ ತಮ್ಮ ನಿಲುವಿನಲ್ಲಿ ಸ್ಥಿರತೆಯನ್ನು ಕಾಪಾಡಿಕೊಳ್ಳುತ್ತಾರೆ.

ಎಡಪಂಥದ ತಳಹದಿ ಮಾರ್ಕ್ಸ್ ವಾದ . ತತ್ವಜ್ಞಾನವಾಗಿ ಅದಕ್ಕಿರುವ ಅಗಾಧ ಶಕ್ತಿ ಜಗತ್ತನ್ನೆ ಆವರಿಸಿದೆ. ಆದರೆ ಅದು ಅನುಷ್ಠಾನಕ್ಕೆ ಬಂದದ್ದು ಕಮ್ಯುನಿಸ್ಟಿನ ರೂಪದಲ್ಲಿ. ಮಾರ್ಕ್ಸ್ ಬಯಸಿದ ಪ್ರಾಲಿಟೇರಿಯೆಟ್ ಡಿಕ್ಟೇಟರ್ಶಿಪ್ ಸಾಧ್ಯವಾಗಲಿಲ್ಲ. ಬದಲು ಪಾಲಿಟ್ ಬ್ಯೂರೋ ಡಿಕ್ಟೇಟರ್ಶಿಪ್ ಆಯಿತು. ಪರಿಣಾಮ ಅಮೆರಿಕಕ್ಕಿಂತ ದೊಡ್ಡ ಬಂಡವಾಳವಾದಿ ರಾಷ್ಟ್ರವಾಗಿ ಚೀನಾ ಸೃಷ್ಟಿಯಾಯಿತು.

ಗಾಂಧಿ ಮತೀಯ ಗಲಭೆಯನ್ನು ಶಾಂತಗೊಳಿಸಲು ಓಡಾಡುತ್ತಿದ್ದಾಗ ಅಜ್ಜನಿಗೆ ಇನ್ನೂ ಒಂದು ಕೆಲಸ ಕೊಡುವ ಎಂದು ಎಡಪಂಥೀಯರು ಡೆಲ್ಲಿ ಕಾಲೇಜಿನಲ್ಲಿ ಮುಷ್ಕರ ಮಾಡಿಸ್ತಾರೆ. ದೇಶವನ್ನು ಒಟ್ಟು ಮಾಡುವ ಎಂದು ಗಾಂಧಿ ಇದ್ದಾಗ ಎಡಪಂಥೀಯರು ಸ್ವಾತಂತ್ರ್ಯ ಕೊಡುವುದಾದರೆ ಇಪ್ಪತ್ತೈದು ಭಾಗ ಮಾಡಿ ಕೊಡಿ ಎಂದು ಬ್ರಿಟಿಷರಿಗೆ ಪತ್ರ ಬರೀತಾರೆ. ಗಾಂಧಿಯವರನ್ನು ಜಾತಿವಾದಿ ಎನ್ನುತ್ತಾರೆ. ಬಂಡವಾಳಶಾಹಿಗಳ ಬಾಲಬುಡುಕ ಎಂದು ಕರೆಯುತ್ತಾರೆ. ಇದನ್ನೆಲ್ಲ ವ್ಯಾವಹಾರಿಕ, ಸಾಂದರ್ಭಿಕ ಘಟನೆಗಳು ಎಂದು ಬಿಟ್ಟುಬಿಡಬಹುದು.

ಆದರೆ ಭಾರತದಲ್ಲಿ ಹಿಂದೂ ಧರ್ಮದ ಬಗ್ಗೆ ಆಳವಾದ ಅಸಹನೆಯನ್ನು ಬೆಳೆಯಿಸಿದ್ದು ಎಡಪಂಥೀಯರು; ಅಂಬೇಡ್ಕರ್ ಅವರಲ್ಲ. ಹಿಂದೂ ಧರ್ಮವನ್ನು ಅಂಬೇಡ್ಕರರಷ್ಟು ತೀಕ್ಷ್ಣವಾಗಿ ಟೀಕಿಸಿದವರು ಬೇರೆ ಯಾರೂ ಇಲ್ಲ. ಆದರೆ ಅಂಬೇಡ್ಕರ್ ಕೂಡ ಉಪನಿಷತ್ತುಗಳನ್ನು ತಿರಸ್ಕರಿಸಲಿಲ್ಲ. ಆ ಒಂದು ಜಾಗವನ್ನು ಅವರು ಹಿಂದೂಗಳಿಗೆ ಉಳಿಸಿದ್ದಾರೆ.

ಆದರೆ ಎಡಪಂಥೀಯರು ಯಾವ ಜಾಗವನ್ನೂ ಹಿಂದೂಗಳಿಗೆ ಉಳಿಸಿಲ್ಲ. ಎಡಪಂಥೀಯರು ತಿರಸ್ಕರಿಸದೇ ಇರುವ ಯಾವುದೇ ಹಿಂದೂ ಸಂಕೇತಗಳೂ ಇಲ್ಲ. ಯಾವುದು ಮಹಾತ್ಮಾ ಗಾಂಧಿಯವರ ಅಸ್ತಿತ್ವವೇ ಆಗಿತ್ತೋ ಆ ಅಸ್ತಿತ್ವಗಳೆಲ್ಲವನ್ನೂ ತಿರಸ್ಕರಿಸುವ ಸಿದ್ಧಾಂತದೊಂದಿಗೆ ಹೊಂದಾಣಿಕೆ ಹೇಗೆ ಸಾಧ್ಯ. ಹಿಂದೂ ಧರ್ಮವೇ ಹೊರಟು ಹೋದರೆ ಗಾಂಧಿಗೇ ಅಸ್ತಿತ್ವವೇ ಇಲ್ಲ.

ಆದ್ದರಿಂದ ಗಾಂಧಿವಾದಿಗಳು ಮತ್ತು ಎಡಪಂಥೀಯರ ನಡುವೆ ಪರಸ್ಪರ ಗೌರವ ಸಾಧ್ಯವೇ ಹೊರತು ಎರಡನ್ನೂ ಒಟ್ಟಿಗೇ ಒಯ್ಯಲು ಸಾಧ್ಯ ಇಲ್ಲ.





# ದಾಂಡಿ ಸತ್ಯಾಗ್ರಹದ

## ಐತಿಹಾಸಿಕ ದಿನದ ನೆನಪು.. (04.05.1930)

**ಗುಜರಾತ್ ರಾಜ್ಯದ ದಾಂಡಿ ಹತ್ತಿರವಿರುವ ಕರಾಡಿಯ ಜೋಪಡಿಯಲ್ಲಿ ಸತ್ಯಾಗ್ರಹಿಗಳ ಜೊತೆಗೆ ಮಂದ ಬೆಳಕಿನ ಕಂದೀಲು ಕೆಳಗೆ ಮಲಗಿದ್ದ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನೇತಾರ, ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರನ್ನು ಬ್ರಿಟಿಷ್ ಸಾಮ್ರಾಜ್ಯ ಯಾವುದೇ ಮುನ್ಸೂಚನೆ ನೀಡದೆ ಕಾಳರಾತ್ರಿಯ ಕಗ್ಗತ್ತಲಲ್ಲಿ 12 ಗಂಟೆ 40 ನಿಮಿಷಕ್ಕೆ ಬಂದು (ಕೆಲವು ಇತಿಹಾಸಕಾರರ ಪ್ರಕಾರ 01:10 ) ಬಂಧಿಸಿ ಸರಕು ತುಂಬುವ ರೈಲು ಗಾಡಿಯಲ್ಲಿ ಕೂರಿಸಿ ಕೊಂಡು ಇಡೀ ರಾತ್ರಿ ಪ್ರಯಾಣಿಸಿ ಕರಾಡಿಯಿಂದ ಬಾಂಬೆಗೆ, ಅಲ್ಲಿಂದ ಪುಣೆಯ ಜೈಲಿಗೆ ರವಾನಿಸಿದ್ದನ್ನು ಪ್ರತ್ಯಕ್ಷದರ್ಶಿಯಾಗಿ ಕಂಡ,ಆಸ್ಟ್ರೇಲಿಯನ್ ಪತ್ರಕರ್ತ ಮತ್ತು 'ಉಪ್ಪಿನ ಸತ್ಯಾಗ್ರಹ' ದ ಬಗ್ಗೆಯೇ ಸಂಶೋಧನೆ ಮಾಡಿರುವ ಖ್ಯಾತ ಲೇಖಕ' ಟಾಮ್ ವೆಬೆರ್ 'ಆವತ್ತಿನ ಘಟನೆಯನ್ನು ಈ ಕೆಳಗಿನಂತೆ ದಾಖಲಿಸಿದ್ದಾರೆ.**

ಅದು ಎರಡು ಗಂಟೆ ಕಾಲವೂ ನಿದ್ದೆ ಮಾಡಿರದ ವೃದ್ಧನ ಮೇಲೆ ಬ್ರಿಟಿಷ್ ಸಾಮ್ರಾಜ್ಯ ನಡೆಸಿದ ಸುವ್ಯವಸ್ಥಿತವಾದ ಸದ್ದು ಗದ್ದಲವಿಲ್ಲದ ತಣ್ಣನೆಯ ಕಾರ್ಯಾಚರಣೆಯಾಗಿತ್ತು.

**ಉಪ್ಪಿನ ಕೋಠಿಯ ಮೇಲೆ ದಾಳಿ..**

ಮಹಾತ್ಮ ಗಾಂಧಿ ಅವರು ಸರಕಾರಿ ಉಗ್ರಾಣದ ಮೇಲೆ ದಾಳಿ ನಡೆಸಲಿರುವ ಸುದ್ದಿ ಭಾರತ, ಬ್ರಿಟನ್ ಮತ್ತು ಅಮೆರಿಕೆಯ ಪತ್ರಿಕೆಗಳಲ್ಲಿ ವರದಿಯಾಯಿತು.

ಇರ್ವಿನ್‌ರಿಗೆ ಬ್ರಿಟಿಷರ ವಿರುದ್ಧ ದಂಗೆಯೆದ್ದಿದ್ದ ಗುಂಪಿನ ದಂಡನಾಯಕನನ್ನು ಬಂಧಿಸುವುದು ಅನಿವಾರ್ಯವಾಯಿತು. ತಮ್ಮ ದಾಳಿಯ



ಉದ್ದೇಶವನ್ನು ಇರ್ವಿನ್‌ಗೆ ನೇರವಾಗಿ ತಿಳಿಸುವುದು ಅಗತ್ಯವೆಂದು ಗಾಂಧೀಜಿಗೆ ತೋರಿತ್ತು. ಮೇ 04 ರಂದು ದಾಂಡಿಗೆ 5 ಮೈಲು ದೂರದಲ್ಲಿದ್ದ ಕರಾಡಿಯ ಗುಡಿಸಲೊಂದರಲ್ಲಿ ಬುಡ್ಡಿ ದೀಪದಡಿ ಕುಳಿತು ಮಧ್ಯರಾತ್ರಿಯಲ್ಲಿ ಇರ್ವಿನ್‌ಗೆ ಗಾಂಧಿ ಪತ್ರ ಬರೆದರು. ಉಪ್ಪಿನ ಮೇಲಿನ ತೆರಿಗೆಯನ್ನು ರದ್ದುಗೊಳಿಸಬೇಕು ಹಾಗೂ ಖಾಸಗಿಯವರಿಗೆ ಉಪ್ಪು ತಯಾರಿಸಲು ಅನುಮತಿ ನೀಡಬೇಕು . ಈ ಎರಡು ಬೇಡಿಕೆಗಳನ್ನು ಈಡೇರಿಸದಿದ್ದಲ್ಲಿ ತಾವು ಮತ್ತು ತಮ್ಮ ಸಂಗಡಿಗರು ಗುಜರಾತಿನ ದಾರ್ಸಾನಕ್ಕೆ ಹೋಗಿ ಸರಕಾರಿ ಉಗ್ರಾಣದಲ್ಲಿನ ಉಪ್ಪನ್ನು ವಶ ಪಡಿಸಿಕೊಳ್ಳುವುದಾಗಿ ಪತ್ರದಲ್ಲಿ ಗಾಂಧಿ ತಿಳಿಸಿದ್ದರು.

ಆದರೆ ಇರ್ವಿನ್ ಈ ಪತ್ರ ತಲುಪುವ ತನಕ ಕಾಯಲಿಲ್ಲ. ಮಧ್ಯ ರಾತ್ರಿ ಕಳೆದು 40 ನಿಮಿಷಗಳ ನಂತರ 20 ರಿಂದ 30 ಮಂದಿ ಬಂದೂಕುಧಾರಿ ಭಾರತೀಯ ಪೊಲೀಸ್ ಪಡೆಯೊಂದಿಗೆ ಮೂವರು ಅಧಿಕಾರಿಗಳು (ಒಬ್ಬ ಬ್ರಿಟಿಷ್, ಇಬ್ಬರು ಭಾರತೀಯರು) ಶಿಬಿರವನ್ನು ಪ್ರವೇಶಿಸಿದರು. ಮಿನುಗು ನಕ್ಷತ್ರಗಳ ನೀಲಿ ಆಕಾಶ ಹೊದ್ದು ಮಾವಿನಮರದ ಕೆಳಗೆ ಮಲಗಿದ್ದ ಸತ್ಯಾಗ್ರಹಿಗಳನ್ನು ದಾಟಿಕೊಂಡು ಅಧಿಕಾರಿಗಳು ಗಾಂಧಿ ಮಲಗಿದ್ದ ಗುಡಿಸಿಲಿನ ಒಳಹೊಕ್ಕರು ಸತ್ಯಾಗ್ರಹಿಗಳ ಮಧ್ಯೆ ನೆಲದ ಮೇಲೆ ಮಲಗಿ ನಿದ್ರಿಸುತ್ತಿದ್ದ ಗಾಂಧಿ ಅವರ ಮುಖದ ಮೇಲೆ ಬೆಳಕನ್ನು ಮಿಂಚಿಸಲಾಯಿತು.

"ನಿಮಗೆ ನನ್ನ ಅವಶ್ಯಕತೆ ಇದೆಯಾ ?" ಉತ್ತರ ಗೊತ್ತಿದ್ದರೂ ಗಾಂಧಿ ಕೇಳಿದರು.

ಅವರನ್ನು 1827ರ ಶಾಸನವೊಂದರ 25ನೇ ನಿಯಮಾನುಸಾರ ಬಂಧಿಸಲಾಗುತ್ತಿದ್ದು, ಇದರ ಪ್ರಕಾರ ವಿಚಾರಣೆ ನಡೆಸದೆಯೇ ಬಂಧಿಸಬಹುದು ಎಂದು ಅಧಿಕಾರಿಗಳು ಗಾಂಧಿಯ ಪ್ರಶ್ನೆಗೆ ಉತ್ತರವಾಗಿ ತಿಳಿಸಿದರು.

ಧಾರ್ಸಾನಾ ಹಡಗು ಕಟ್ಟೆಯಲ್ಲಿ ಗಾಂಧಿ ಮತ್ತೊಂದು ಹೊಸ ಭಾಷಣವನ್ನು ಮಾಡುವುದು ಬ್ರಿಟಿಷ್ ಸರಕಾರಕ್ಕೆ ಅನಪೇಕ್ಷಣೀಯವಾಗಿತ್ತು. ಈ ವೇಳೆಗೆ ಕರಾಡಿ ಶಿಬಿರದಲ್ಲಿದ್ದ ಸತ್ಯಾಗ್ರಹಿಗಳೆಲ್ಲ ನಿದ್ದೆಯಿಂದ ಎಚ್ಚರಗೊಂಡಿದ್ದರು. ಯಾರನ್ನೂ ಗಾಂಧಿ ಅವರ ಹತ್ತಿರ ಹೋಗಲು ಪೊಲೀಸರು ಬಿಡಲಿಲ್ಲ. ಹಾಸಿಗೆಯ ಸುರುಳಿಯೊಂದನ್ನು ಸಿದ್ಧಗೊಳಿಸುವಂತೆ ಗಾಂಧಿ, ತಮ್ಮ ಮೊಮ್ಮಗ ಕಾಂತಿ ಗಾಂಧಿಗೆ ತಿಳಿಸಿದರು.

ಇರ್ವಿನ್ ರಿಗೆ ಬರೆದಿದ್ದ ಬಹುತೇಕ ಮುಕ್ತಾಯಕ್ಕೆ ಬಂದಿದ್ದ ಪತ್ರವನ್ನು 'ಯಂಗ್ ಇಂಡಿಯಾ' ಗೆ ಕಳುಹಿಸಿ

ಕೊಡುವಂತೆ ವಾಲ್ಜಿ ದೇಸಾಯಿಗೆ ತಿಳಿಸಿದರು.

" ಹಲ್ಲುಜ್ಜಿ ಮುಖ ತೊಳೆದುಕೊಳ್ಳಬಹುದೇ ? "

ಎಂದು ಪೊಲೀಸ್‌ರನ್ನು ಗಾಂಧಿ ಕೇಳಿದರು. ಅದಕ್ಕೆ ಅಧಿಕಾರಿಗಳ ಆಕ್ಷೇಪ ಇರಲಿಲ್ಲ. ಆದರೆ ಬೇಗ ಮುಗಿಸುವಂತೆ ಅವರು ಹೇಳಿದರು. ಕೆಲವೇ ನಿಮಿಷಗಳಲ್ಲಿ ಗಾಂಧಿ ಸಿದ್ಧರಾದರು. ಒಂದೆರಡು ತಕಲಿಗಳು ಹಾಗೂ ಹತ್ತಿ ಲಡಿಗಳ ಪೊಟ್ಟಣಗಳನ್ನೂ ತಮ್ಮೊಡನೆ ತೆಗೆದು ಕೊಂಡರು..

ಅಧಿಕಾರಿಗಳ ಅನುಮತಿಯೊಂದಿಗೆ ಗಾಂಧಿ 'ವೈಷ್ಣವ ಜನತೋ' ಭಜನೆಯನ್ನು ಹಾಡುವಂತೆ ಪಂಡಿತ್ ಖರೆ ಅವರಿಗೆ ತಿಳಿಸಿದರು. ಈ ಭಜನೆಯ ಹಾಡಿನೊಂದಿಗೆ ಉಪ್ಪಿನ ಸತ್ಯಾಗ್ರಹದ ಪಾದಯಾತ್ರೆ ಆರಂಭವಾಗಿತ್ತು. ಈಗ 'ಖೈದಿ' ಗಾಂಧಿ ತಲೆ ಬಾಗಿ ಕಣ್ಣು ಮುಚ್ಚಿ ಅದನ್ನು ಕೇಳಿಸಿಕೊಂಡರು. ಭಜನೆ ಮುಗಿಯುತ್ತಿದ್ದಂತೆ ಗಾಂಧಿಯನ್ನು ಅಲ್ಲಿಂದ ಕರೆದೊಯ್ಯಲಾಯಿತು.

ಐವತ್ತೆಂಟು ವರುಷಗಳ ನಂತರ ಅಂದು ಗಾಂಧಿ ಅವರ ಬಂಧನದ ಪ್ರತ್ಯಕ್ಷದರ್ಶಿಯಾಗಿದ್ದ ಕರಾಡಿ ಗ್ರಾಮದ ಒಬ್ಬರು, ಆ ದಿನದ ದೃಶ್ಯವನ್ನು ವರ್ಣಿಸ ತೊಡಗಿದಂತೆ ಗಳಗಳನೆ ಅತ್ತುಬಿಟ್ಟರು. ಪಾದಯಾತ್ರಿಗಳು ತಮ್ಮ ಅಮೂಲ್ಯವಾದ ವೇಳೆಯನ್ನು ಗಾಂಧಿಯೊಟ್ಟಿಗೆ ಕಳೆದಿದ್ದರು. ಗಾಂಧಿಗೆ ತಮ್ಮ ಬಗ್ಗೆ ವಿಶೇಷ ಮಮತೆ ಎಂದು ಹಿಗ್ಗಿದ್ದರು.

' ಅವರು ನನ್ನನ್ನು ಮಗನಂತೆ ನೋಡಿಕೊಳ್ಳುತ್ತಿದ್ದರು '..

' ಅವರು ನನಗೆ ತಂದೆಯ ಸಮಾನರು..'..

ಹೀಗೆ ಒಬ್ಬೊಬ್ಬರ ನೆನಪಿನಲ್ಲಿ ಅಚ್ಚಳಿಯದೆ ಗಾಂಧಿ ಉಳಿದಿದ್ದರು. ಪ್ಯಾರೇಲಾಲ್‌ರ ಗೈರು ಹಾಜರಿಯಲ್ಲಿ ಅವರ ಪತ್ರ ವ್ಯವಹಾರಗಳನ್ನು ನೋಡಿಕೊಳ್ಳಲು ಯಾರದಾದರೂ ಸಹಾಯ ಬೇಕಾಗುತ್ತಿತ್ತು. ನೂಲುವಾಗ ಏನಾದರೂ ತೊಂದರೆಯಾದರೆ ಸಹಾಯ ಬೇಕಾಗುತ್ತಿತ್ತು..



ಕೆಲವೇ ಮೈಲು ದೂರದಲ್ಲಿದ್ದ ಲೆವೆಲ್ ಕ್ರಾಸಿಂಗ್ ವರೆಗೆ ಬಂಧಿತ ಗಾಂಧಿಯನ್ನು ಲಾರಿಯೊಂದರಲ್ಲಿ ಕರೆದೊಯ್ಯಲಾಯಿತು. ನಂತರ ಆ ಕತ್ತಲೆಯಲ್ಲೇ 'ಫ್ರಾಂಟಿಯರ್ ಮೇಲ್' ರೈಲಿಗೆ ಹತ್ತಿಸಲಾಯಿತು. 'ಫ್ರಾಂಟಿಯರ್ ಮೇಲ್' ರೈಲು ಅಲ್ಲಿ ನಿಲ್ಲುತ್ತಿರಲಿಲ್ಲ, ವಾಯುವ್ಯ ಸರಹದ್ದು ಪ್ರಾಂತ್ಯದಿಂದ ಮುಂಬೈಗೆ ಹೋಗುತ್ತಿದ್ದ ದೀರ್ಘಯಾನದ ಆ ರೈಲು ಅಂದು ರಾತ್ರಿ ಅಲ್ಲಿ ನಿಂತಿತ್ತು.

ಮೇ.05 ರಂದು ಬೆಳಿಗ್ಗೆ 06:40ಕ್ಕೆ ರೈಲು ಬೋರಿವಿಲಿ ಸಮೀಪ ಉತ್ತರ ಮುಂಬೈನಲ್ಲಿ ನಿಂತಿತು. ಇದು ಆ ರೈಲು ನಿಲ್ಲುವ ಸ್ಟೇಶನ್ ಆಗಿರಲಿಲ್ಲ ಆದರೂ ಅಂದು ನಿಲ್ಲಿಸಲಾಗಿತ್ತು. ರೈಲಿನಿಂದ ಆತುರಾತುರವಾಗಿ ಗಾಂಧಿಯನ್ನು ಇಳಿಸಿದ ಅಧಿಕಾರಿಗಳು ಹತ್ತಿರದಲ್ಲಿದ್ದ ಜೀಪೊಂದಕ್ಕೆ ಅವರನ್ನು ದಬ್ಬಿದರು. ಅಲ್ಲಿಂದ 125 ಮೈಲು ದೂರದಲ್ಲಿದ್ದ ಪುಣೆಯ ಯರವಾಡ ಜೈಲಿಗೆ ಜೀಪು ವೇಗವಾಗಿ ಓಡಿತು. ಈ ಮಧ್ಯೆ ರೈಲು ನಿಲ್ದಾಣದ ಹೊರಗೆ, ಬೋರಿವಿಲಿಗೆ ಉತ್ತರದಲ್ಲಿ ಪೊಲೀಸ್ ಜೀಪು ಮತ್ತು ಬ್ರಿಟಿಷ್ ಸೈನಿಕರು ನಿಂತಿರುವುದನ್ನು ಇಬ್ಬರು ಅಮೆರಿಕನ್ ಪತ್ರಕರ್ತರು ಗಮನಿಸಿದ್ದರು. ಗಾಂಧಿಯವರು ಪತ್ರಕರ್ತರ ಗುರುತನ್ನು ಹಿಡಿದರು.

ಅಮೆರಿಕನ್ ಜನರಿಗೆ ನಿಮ್ಮ ಸಂದೇಶವೇನು ..? ಎಂದು ಪತ್ರಕರ್ತರು ಕೇಳಿದರು,

ಅವರಿಗೆ ಉತ್ತರವಾಗಿ....

"ವಿಷಯವನ್ನು ನಿಕಟವಾಗಿ, ಸೂಕ್ಷ್ಮವಾಗಿ ಅಧ್ಯಯನ ಮಾಡಿ ಹಾಗೂ ಅದರ ಹಿರಿಮೆ- ಯೋಗ್ಯತೆಗಳಿಗೆ ಅನುಗುಣವಾಗಿ ತೀರ್ಮಾನಕ್ಕೆ ಬನ್ನಿ' .ಎಂದು ಗಾಂಧಿ ಆ ಪತ್ರಕರ್ತರಿಗೆ ಹೇಳಿದರು. ಅಲ್ಲಿ ಪೊಲೀಸ್ ಪಡೆಯೊಂದಿಗೆ ಒಬ್ಬ ವೈದ್ಯರೂ ಇದ್ದರು. ಗಾಂಧೀಜಿ ಅವರನ್ನು ಯರವಾಡ ಜೈಲಿನಲ್ಲಿ ಬಂಧಿಸಿಡಲಾಯಿತು. ನೂಲು ತೆಗೆಯಲು ಗಾಂಧಿಗೆ ಅನುಮತಿಯನ್ನು ನೀಡಲಾಯಿತು.

ಹಾಗೆಯೇ, ಹೊಲಿಗೆ ಯಂತ್ರವನ್ನು ಬಳಸಲು ಅನುವು ಮಾಡಿ ಕೊಡಲಾಯಿತು. ಇದಕ್ಕೆಲ್ಲ ಗಾಂಧೀಜಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಆದರೆ ಉಳಿದವರಿಗೆ ಗಾಂಧೀಜಿಯವರ ಬಗ್ಗೆ ಚಿಂತೆ ಶುರುವಾಗಿತ್ತು. ಏಕೆಂದರೆ ಅವರನ್ನು ಕರಾಳ ಕತ್ತಲ ರಾತ್ರಿಯಲ್ಲಿ ಬಂಧಿಸಲಾಗಿತ್ತು. ಬ್ರಿಟಿಷ್ ಆಡಳಿತಗಾರರಿಗೆ ಜನರ ಪ್ರತಿಭಟನೆಯ ಹೆದರಿಕೆ. ಏಕೆಂದರೆ ಜನರು ಗಾಂಧಿಯವರನ್ನು "ಪ್ರವಾದಿ " ಎಂದೇ ಭಾವಿಸಿದ್ದರು..

**(ಸೌಜನ್ಯ : 'ಮೋಹನ್ ದಾಸ್ ಒಂದು ಸತ್ಯಕಥೆ' ಬೃಹತ್ ಕೃತಿ..ಮೂಲ ಲೇಖಕರು : ರಾಜ್ ಮೋಹನ್ ಗಾಂಧಿ ಕನ್ನಡಕ್ಕೆ ಜಿ.ಎನ್.ರಂಗನಾಥ್ ರಾವ್)..**




# ಸರ್ವೋದಯ ನಾಯಕ
# ಎಚ್.ಎಸ್. ದೊರೆಸ್ವಾಮಿ

ಡಾ. ಎಚ್. ಎಸ್. ದೊರೆಸ್ವಾಮಿ ಕನ್ನಡ ಪ್ರೇಮಿಯಾಗಿ ಮತ್ತು ನಾಡಿನ ಮಹತ್ವದ ಹೋರಾಟಗಾರರಾಗಿ ಹೆಸರಾಗಿದ್ದವರು.



**ಬೆಂ**ಗಳೂರು ಸಮೀಪದ ಹಾರೋಹಳ್ಳಿಯಲ್ಲಿ 1918ರ ಏಪ್ರಿಲ್ 10ರಂದು ಜನಿಸಿದ ಹಾರೋಹಳ್ಳಿ ಶ್ರೀನಿವಾಸಯ್ಯ ದೊರೆಸ್ವಾಮಿ ಅವರದು ಬಹುಮುಖ ವ್ಯಕ್ತಿತ್ವ. ಅವರು ಕೈಗೊಂಡ ಹೋರಾಟದ ಬದುಕು ದೇಶದ ಸ್ವಾತಂತ್ರ್ಯ ಹೋರಾಟದಿಂದ ಹಿಡಿದು ಸರ್ಕಾರದ ಭೂ ಕಬಳಿಕೆಯ ವಿರುದ್ಧದ ಹೋರಾಟದವರೆಗೂ ಸಾಗಿತ್ತು.

ಮಹಾತ್ಮರ "ಮೈ ಅರ್ಲೀ ಲೈಫ್" ಪುಸ್ತಕ, ದೊರೆಸ್ವಾಮಿ ಅವರು ಸ್ವಾತಂತ್ರ್ಯ ಚಳವಳಿಗೆ ಧುಮ್ಮಿಕ್ಕಲು ಪ್ರೇರೇಪಿಸಿತು. ಸ್ವಾತಂತ್ರ್ಯ ಹೋರಾಟದ ಭಾಗವಾಗಿ ಅವರು ಸೆರೆಮನೆ ವಾಸವನ್ನು ಅನುಭವಿಸಿದರು. ಅವರ ಹೋರಾಟದಲ್ಲಿ ಅವರ ಹಿರಿಯ ಸಹೋದರ ಶ್ರೀ ಎಚ್.ಎಸ್. ಸೀತಾರಾಮ್, ಸರ್ದಾರ್ ವೆಂಕಟರಾಮಯ್ಯ, ಎ .ಜಿ. ರಾಮಚಂದ್ರರಾವ್ ಮುಂತಾದವರು ಮಾರ್ಗದರ್ಶಕರಾಗಿದ್ದರು. ಪತ್ರಕರ್ತರಾಗಿಯೂ ದೊರೆಸ್ವಾಮಿ ಅವರು ಕಾರ್ಯನಿರ್ವಹಿಸಿ, ಬ್ರಿಟಿಷರ ವಿರುದ್ಧ ತಮ್ಮ ಪತ್ರಿಕೆಯನ್ನು ಒಂದು ಪ್ರಬಲ ಅಸ್ತ್ರವಾಗಿ ಉಪಯೋಗಿಸಿಕೊಂಡರು.

ತಮ್ಮ ಬದುಕನ್ನು ಮಹಾತ್ಮ ಗಾಂಧೀಜಿಯವರ ಚಿಂತನೆಗೇ ಪೂರ್ಣವಾಗಿ ಅರ್ಪಿಸಿಕೊಂಡು, ಕೊನೆಯವರೆಗೂ ನಮ್ಮ ಮಧ್ಯೆ ಮಹಾತ್ಮರ ಕೊನೆಯ ಕೊಂಡಿಯಂತೆ ಜೀವನ ಸಾಗಿಸಿದರು. ಕರ್ನಾಟಕ ಏಕೀಕರಣಕ್ಕಾಗಿಯೂ ದುಡಿದ ಶತಾಯುಷಿ ದೊರೆಸ್ವಾಮಿ ಅವರ ಸರಳತೆ ಮತ್ತು ಸಜ್ಜನಿಕೆ ಎಲ್ಲರಿಗೂ ಒಂದು ಮಾದರಿಯಾಗಿತ್ತು.

ದೊರೆಸ್ವಾಮಿ ಅವರು ತಮಗೆ ಕನ್ನಡದಲ್ಲಿ ಪ್ರೀತಿ ಹುಟ್ಟುವುದಕ್ಕೆ ಹಾಗೂ ಬದುಕಿನಲ್ಲಿ ಉತ್ತಮವಾಗಿ ಬಾಳಬೇಕೆಂದುದಕ್ಕೆ ಪ್ರೇರೇಪಣೆ ಆದ ಆಚಾರ್ಯ ಬಿ.ಎಂ.ಶ್ರೀ, ವಿ. ಸೀತಾರಾಮಯ್ಯ, ಸಿ. ಕೆ. ವೆಂಕಟರಾಮಯ್ಯ, ಎ. ಆರ್. ಕೃಷ್ಣಶಾಸ್ತ್ರಿ, ಎಂ. ಆರ್. ಶ್ರೀನಿವಾಸಮೂರ್ತಿ ಮುಂತಾದ ಮಹನೀಯರನ್ನು ಭಕ್ತಿಭಾವದಿಂದ ಸ್ಮರಿಸುತ್ತಿದ್ದರು. ತಮ್ಮ ಓದಿನ ನಂತರದ ದಿನಗಳಲ್ಲಿ ಕೆಲಕಾಲ ಉಪಾಧ್ಯಾಯ ವೃತ್ತಿ ನಿರ್ವಹಿಸುತ್ತಿದ್ದ ಹಂತದಲ್ಲಿ ಸ್ವಾತಂತ್ರ್ಯ ಚಳುವಳಿಯ ಕಡೆ ಮನಸ್ಸು ಹರಿದು ಸೆರೆವಾಸಕ್ಕೆ ತಳ್ಳಲ್ಪಟ್ಟ ದೊರೆಸ್ವಾಮಿ ಅವರು, ತಮಗೆ ಅಂದಿನ ದಿನಗಳಲ್ಲಿ ಹಿಂಸೆ ಮತ್ತು ಅಹಿಂಸೆಯ ನಡುವೆ ವ್ಯತ್ಯಾಸದ ಅರಿವೇ ಇಲ್ಲದೆ, ಉತ್ಸಾಹದಿಂದ ಟೈಮ್ ಬಾಂಬ್ ಸರಬರಾಜು ಮಾಡುತ್ತಿದ್ದರಂತೆ.

"ಈ ಟೈಮ್ ಬಾಂಬಿನಿಂದ ಜೀವಹಾನಿ ಆಗುತ್ತಿರಲಿಲ್ಲ ಎಂಬುದು ಸ್ಪಷ್ಟವಿತ್ತು. ಈ ಟೈಮ್ ಬಾಂಬ್ ಅನ್ನು ಇಲಿಗಳ ಬಾಲಕ್ಕೆ ಕಟ್ಟಿ ದಾಖಲೆಗಳನ್ನು ನಾಶಪಡಿಸುವುದಕ್ಕಾಗಿ ಸರ್ಕಾರಿ ಕಚೇರಿಗಳಲ್ಲಿ ತೂರಿಬಿಡುತ್ತಿದ್ದೆವು. ಆ ಉದ್ದೇಶಕ್ಕಾಗಿ ಬಹಳಷ್ಟು ಕೆಲಸ ಮಾಡಿದೆ. ಹಾಗೆ ಮಾಡುವಾಗ ಒಮ್ಮೆ ಪೋಲೀಸರ ಕೈಗೆ ಸಿಕ್ಕಿ ಭೀಕರ ಏಟಿಗೆ ಸಿಲುಕುವ ಸಂದರ್ಭ ನಿರ್ಮಾಣವಾಗಿತ್ತು. ಅಕಸ್ಮಾತ್ ಪೋಲೀಸರ ಕೆಂಗಣ್ಣಿನ ಭೀಕರ ಹೊಡೆತ ತಪ್ಪಿತಾದರೂ, 14 ತಿಂಗಳುಗಳ ಕಾಲ



ಸೆರೆವಾಸವಂತೂ ಆಯಿತು. ಈ ಸೆರೆಮನೆಗಳಲ್ಲಿದ್ದ ದಿನ ಅತ್ಯಂತ ಸಂತಸಭರಿತವಾಗಿಯೂ, ಜೀವನದೃಷ್ಟಿಯಿಂದ ಅತ್ಯುಪಯುಕ್ತವೂ ಆಗಿತ್ತು" ಎಂದು ದೊರೆಸ್ವಾಮಿ ಅವರು ತಮ್ಮ ಅಂದಿನ ಚಳುವಳಿಯ ದಿನಗಳನ್ನು ನೆನೆಯುತ್ತಿದ್ದರು. ಮುಂದೆ ಮಹಾತ್ಮಾ ಗಾಂಧೀ ಅವರ ಸಂಪರ್ಕದಲ್ಲಿದ್ದ ದಿನಗಳನ್ನು ನೆನೆಯುವ ದೊರೆಸ್ವಾಮಿ ಅವರು "ನಿಜವಾದ ಸಮಾಜವಾದಿ ಅಂದರೆ ಮಹಾತ್ಮರೊಬ್ಬರೇ. ಅವರ ಬಳಿ ಒಂದು ತುಂಡು ಬಟ್ಟೆ ಮತ್ತು ಕನ್ನಡಕದ ಹೊರತಾಗಿ ಮತ್ತೇನೂ ಇರಲಿಲ್ಲ. ಹೀಗಾಗಿ ಅವರೊಬ್ಬರೇ ಪರಿಪೂರ್ಣ ಸಮಾಜವಾದಿ. ಬಹುತೇಕ ಮಂದಿ ಕೇವಲ ಮಾತಿನಲ್ಲಷ್ಟೇ ಸಮಾಜವಾದಿಗಳು" ಎನ್ನುತ್ತಿದ್ದರು.

ಮುಂದೆ ಅಂದಿನ ಪ್ರಧಾನಿ ಇಂದಿರಾಗಾಂಧೀ ಆಳ್ವಿಕೆಯಲ್ಲಿ ತುರ್ತುಪರಿಸ್ಥಿತಿ ವಿರೋಧಿಸಿ ಜೈಲುವಾಸ ಅನುಭವಿಸಿದ ದೊರೆಸ್ವಾಮಿ ಅವರು, 2010 ರ ದಶಕದಲ್ಲಿ ಲಕ್ಷಾಂತರ ಎಕರೆ ಸರ್ಕಾರೀ ಭೂಮಿ, ಭೂಗಳ್ಳರ ಪಾಲಾಗುತ್ತಿದ್ದುದನ್ನು ಹೋರಾಡಿ ತಪ್ಪಿಸಿದ್ದಾರೆ. ಹಳ್ಳಿಗಳನ್ನು ಕಸದ ಕೊಂಪೆಗಳನ್ನಾಗಿ ಮಾಡಿ ಕಸದ ಪರ್ವತ ರಾಶಿಗಳಿಂದ ತುಂಬಿ, ಸುತ್ತಮುತ್ತಲಿನ ಜನ ಊಹಿಸಿಕೊಳ್ಳಲಾಗದ ನರಕದ ಬಾಳನ್ನು ಬೆಂಗಳೂರು ಸಮೀಪದ ಮಂಡೂರು ಗ್ರಾಮದ ಜನರು ಅನುಭವಿಸಬೇಕಾಗಿದ್ದ ಸಂದರ್ಭದಲ್ಲಿ, ತಾವೇ ಅಲ್ಲಿನ ಜನರ ನೇತೃತ್ವ ವಹಿಸಿ ಬೆಳೆಯುತ್ತಿದ್ದ ಕಸದರಾಶಿಗೆ ತಡೆ ಉಂಟಾಗುವಂತೆ ಮಾಡುವಲ್ಲಿ ಯಶಸ್ವಿಯಾದರು. ಬೆಳಗಾವಿಯಲ್ಲಿ ವಿಧಾನಸಭೆ ಅಧಿವೇಶನ ನಡೆದ ಸಮಯದಲ್ಲಿ ತಮ್ಮ ಸಂಗಡಿಗರೊಂದಿಗೆ ಹೋಗಿ ಹೋರಾಟಮಾಡಿ "ಬಡಜನರಿಗೆ ಭೂಮಿಕೊಟ್ಟು ಅವರ ಬದುಕಿಗೆ ಖಂಡಿತ ಆಸರೆ ಆಗಿಯೇ ಆಗುತ್ತೇವೆ" ಎಂದು ಆಡಳಿತಪಕ್ಷ ಮಾತ್ರವಲ್ಲದೆ, ವಿರೋಧಪಕ್ಷಗಳಿಂದಲೂ ಮಾತು ತೆಗೆದುಕೊಂಡು ಬಂದರು.

ಕರ್ನಾಟಕ ಏಕೀಕರಣದ ಹೋರಾಟದ ನಿಟ್ಟಿನಲ್ಲಿ ಸ್ವಾತಂತ್ರ್ಯ ಬಂದ ದಿನಗಳಲ್ಲಿ ತಾವು ನೆಹರೂ, ಸರ್ದಾರ್ ಪಟೇಲ್ ಮುಂತಾದವರುಗಳೊಡನೆ ಆಡಿದ ಮಾತುಕತೆ, ನಂತರ ಮೈಸೂರು ರಾಜರು ಭಾರತದ ಒಕ್ಕೂಟಕ್ಕೆ ಸೇರಲು ನಡೆಸಿದ ಹೋರಾಟ, ಕೆಂಗಲ್ ಹನುಮಂತಯ್ಯನವರ ವಿಶಾಲ ಮೈಸೂರಿಗೆ ಸೇರಲು ಪ್ರಾಂತ್ಯಗಳ



ಪ್ರತಿನಿಧಿಗಳಿಗೆ ಆಹ್ವಾನ, ಆಂಧ್ರದಲ್ಲಿ ಏಕೀಕರಣಕ್ಕೆ ಆದ ಉಪವಾಸ ಸತ್ಯಾಗ್ರಹದ ದುರ್ಘಟನೆ, ನಂತರ ಭಯಭೀತರಾದ ನೆಹರೂ ಅವರಿಂದ ಕರ್ನಾಟಕ ನಿರ್ಮಾಣದ ನಿರ್ಧಾರ ಇತ್ಯಾದಿ ಪ್ರತೀ ವಿವರಗಳೂ ಅವರ ನೆನಪಲ್ಲಿ ಕೊನೆಯವರೆಗೆ ಅಚ್ಚಳಿಯದೆ ಉಳಿದಿದ್ದವು.

"ಗಾಂಧೀ ಮತ್ತು ಅಂಬೇಡ್ಕರ್ ಅವರುಗಳಲ್ಲಿ ಭಿನ್ನಾಭಿಪ್ರಾಯ ಇತ್ತೇ ವಿನಃ ವಿರೋಧಿತ್ವ ಇರಲಿಲ್ಲ" ಎನ್ನುತ್ತಿದ್ದ ದೊರೆಸ್ವಾಮಿ ಅವರು ಅಂಬೇಡ್ಕರ್ ಅವರು ಬಂಗಾಳದಲ್ಲಿ ಚುನಾವಣೆಯಲ್ಲಿ ಸೋತರೆಂಬ ಕಾರಣದಿಂದ ನೆಹರೂ ಅವರು, ಅವರನ್ನು ಯಾವುದಕ್ಕೂ ಪರಿಗಣಿಸದಿದ್ದಾಗ, ಗಾಂಧೀ ಅವರು "ಅಂಬೇಡ್ಕರ್ ಇಲ್ಲದೆ ನೀನು ಸಂವಿಧಾನ ರಚನೆಗೆ ಮತ್ಯಾರೂ ಶ್ರೇಷ್ಠರನ್ನು ಅರಸುವುದು ಸಾಧ್ಯವಿಲ್ಲ ಎಂದು ಮನದಟ್ಟು ಮಾಡಿಸಿ ಅಂಬೇಡ್ಕರ್ ಅವರಿಂದ ಮಹತ್ಕಾರ್ಯ ಆಗುವಲ್ಲಿ ಪ್ರಮುಖ ಪಾತ್ರವಹಿಸಿದರು" ಎಂದು ನುಡಿಯುತ್ತಿದ್ದರು.

"ನನಗೆ ನಾನು ಬದುಕಿದ ರೀತಿಯಲ್ಲಿ ಸಂತೃಪ್ತಿಯಿದೆ. ಏನೋ ಒಂದಷ್ಟು ಮಾಡಿದ್ದೇನೆ, ಬದುಕನ್ನು ಯೋಗ್ಯವಾಗಿ ಬಾಳಿದ ಭಾವವಿದೆ" ಎಂದು ದೊರೆಸ್ವಾಮಿ ನುಡಿಯುತ್ತಿದ್ದರು.

ಈ ಹಿರಿಯ ಗಾಂಧಿವಾದಿಯ ಬಾಳು 2021ರ ಮೇ 26ರಂದು ಅಂತ್ಯಗೊಂಡಿತು.

**ಲೇಖನ ಕೃಪೆ : ಕನ್ನಡ ಸಂಪದ**



# ವಿದೇಶಿಯರ ಕಣ್ಣಲ್ಲಿ ಗಾಂಧಿ

**ಗಾಂ**ಧಿ ಸದಾ ನಮ್ಮಲ್ಲಿ ಜಾಗೃತವಾಗಿರಬೇಕಾದ ಪ್ರಜ್ಞೆ. ಗಾಂಧೀಜಿ ಕುರಿತು ನಮ್ಮ ಜನರ ಅಭಿಪ್ರಾಯಗಳನ್ನು ನಾವು ಬಲ್ಲೆವು. ಜಗತ್ತೇ ನಿಬ್ಬೆರಗಾಗಿ ನೋಡಿದ ಈ ಆಧುನಿಕ ಸಂತನ ಕುರಿತು ವಿದೇಶೀಯರು ಏನು ಹೇಳಿದ್ದಾರೆ ಅನ್ನುವುದನ್ನೂ ನಾವು ಅರಿಯಬೇಕು.

ಈ ನಿಟ್ಟಿನಲ್ಲಿ ಗಾಂಧೀಜಿ ಕುರಿತು ಡಾ.ಹೇಯ್ನೆಸ್ ನೀಡಿದ್ದ ಉಪನ್ಯಾಸವನ್ನು ಇಲ್ಲಿ ನೀಡಿದ್ದೇವೆ.

ಇಂದು ಬೆಳಗ್ಗೆ ನಾನು ಭಾರತದ ಮಹಾತ್ಮಾ ಗಾಂಧಿ ಮತ್ತು ಅವರು ಕೈಗೊಂಡಿರುವ ಕಾರ್ಯದ ಜಾಗತಿಕ ಮಹತ್ವದ ಕುರಿತು ಮಾತನಾಡಲು ಬರುವಾಗ ಅಯಾಚಿತವಾಗಿ ಹಿಂದಿನ ಸಂದರ್ಭವೊಂದು ನನೆಪಿಗೆ ಬಂದಿತು. ಅದು ನಡೆದು ಬಹಳ ಸಮಯವೇನಾಗಿಲ್ಲ. ಆ ದಿನ ನಾನು ಇದೇ ಸಭೆಯಲ್ಲಿ ಮೊದಲ ಬಾರಿಗೆ ಗಾಂಧಿಯವರನ್ನು ಪರಿಚಯಿಸಿದ್ದೆ. ಅಂದು ಕೂಡ ನನಗೆ ಇಂದು ಇರುವಷ್ಟೇ ವಿಶ್ವಾಸವಿತ್ತು.

ಈ ವ್ಯಕ್ತಿ ಈ ಕಾಲಘಟ್ಟದಲ್ಲಿ ಜೀವಿಸಿರುವ ಅತಿಶ್ರೇಷ್ಠ ಮನುಷ್ಯನೆಂಬ ಭಾವನೆ ನನಗೆ ಅಂದಿಗೂ ಇಂದಿಗೂ ಸಮನಾಗಿದೆ. ಈ ಕೆಲವು ತಿಂಗಳಲ್ಲಿ ಏನೆಲ್ಲ ಬದಲಾಗಿಹೋಯಿತು! ಆ ಸಮಯದಲ್ಲಿ ಗಾಂಧಿಯವರ ಹೆಸರು ಭಾರತದ ಗಡಿಗಳಾಚೆ ಗೊತ್ತೇ ಇರಲಿಲ್ಲ. ಆಗ ನಾನು ನನ್ನಲ್ಲಿದ್ದ ಅತ್ಯಲ್ಪ ಮಾಹಿತಿ ಇಟ್ಟುಕೊಂಡು ಚಿಕ್ಕದಾಗಿ ವಿವರ ನೀಡುವ ಪ್ರಯತ್ನ ಮಾಡಿದ್ದೆ. ಆ ಸಮಯದಲ್ಲೇ ನನ್ನೊಳಗೆ, ಇಲ್ಲೊಬ್ಬ ಅತ್ಯುನ್ನತ ಮಟ್ಟದ ಸೃಜನಶೀಲ ಆಧ್ಯಾತ್ಮಿಕ ವ್ಯಕ್ತಿ ಇರುವರೆಂಬ ಭಾವನೆ ಉದಿಸಿತ್ತು. ಹಾಗಿದ್ದೂ ಅವರ ಕುರಿತು ಹೆಚ್ಚಿನ ಮಾಹಿತಿ ಕಲೆಹಾಕುವಲ್ಲಿ ನಾನು ವಿಫಲಗೊಂಡಿದ್ದೆ.

ಇಂದು ಗಾಂಧೀಜಿಯವರ ಹೆಸರು ಪತ್ರಿಕೆಗಳ ಮೊದಲ ಪುಟದಲ್ಲೇ ದಪ್ಪ ಅಕ್ಷರಗಳಲ್ಲಿ ಅಚ್ಚಾಗತೊಡಗಿದೆ. ದಿನಪತ್ರಿಕೆ ಹಾಗೂ ವಾರಪತ್ರಿಕೆಗಳಲ್ಲಿ ಈ ದೇಶದ – ಇಂಗ್ಲೆಂಡ್ ಹಾಗೂ ಖಂಡದ ಕುರಿತಾದ ವಿಮರ್ಶೆಗಳು ಹಾಗೂ ಲೇಖನಗಳ ಸಂಖ್ಯೆ ಹೆಚ್ಚುತ್ತಲೇ ಇದೆ. ಅಮೆರಿಕದ ಪ್ರತಿಷ್ಠಿತ ಪತ್ರಿಕೆ 'ದ ನ್ಯೂಯಾರ್ಕ್ ವರ್ಲ್ಡ್', ಗೂಢಚಾರ ವರದಿಗಾಗಿ ಭಾರತಕ್ಕೆ ತನ್ನ ಪತ್ರಕರ್ತನನ್ನು ಕಳಿಸಿದರೆ, ಆತ ಮರಳಿ ಬಂದು ಗಾಂಧಿ ಮತ್ತವರ ಅಹಿಂಸೆ ಹಾಗೂ ಅಸಹಕಾರ ಚಳವಳಿಗಳ ಕುರಿತಾಗಿ ಬರೆಯುತ್ತಾನೆ!

ಕೆಲವೇ ತಿಂಗಳಲ್ಲಿ ಈ ಮನುಷ್ಯ ಖ್ಯಾತಿಯ ಉತ್ತುಂಗಕ್ಕೆ ಏರಿದ್ದಾರೆ. ಅವರ ಈ ಸಾಧನೆ ಶಾಶ್ವತವಾಗಿ ನಿಲ್ಲುವ ಎಲ್ಲ ಭರವಸೆಯನ್ನೂ ಹೊತ್ತುಕೊಂಡಿದೆ. ಅವರೀಗ ಜಗತ್ತಿನ ಗಮನ ಸೆಳೆಯುವ ಕೇಂದ್ರಬಿಂದುವಿನಂತೆ ಆಗಿದ್ದಾರೆ. 1918 – 19 ರಲ್ಲಿ ವುಡ್ರೋ ವಿಲ್ಸನ್ ಮತ್ತು 1920 – 21 ರಲ್ಲಿ ನಿಕೊಲೈ ಲೆನಿನ್ ಈ

ಸ್ಥಾನವನ್ನು ಪಡೆದಿದ್ದರು. ಆದರೆ ಈಗ, ಈತನಕ ಯಾವುದೇ ಉನ್ನತ ಹುದ್ದೆ ಹೊಂದಿಲ್ಲದ, ಯಾವುದೇ ಅಧಿಕಾರದ ಪ್ರಭಾವಳಿ ಇಲ್ಲದ ಪುಟ್ಟ ನಿಲುವಿನ ಪೌರಸ್ತ್ಯ ವ್ಯಕ್ತಿಯೊಬ್ಬ ಈ ಸ್ಥಾನಕ್ಕೇರಿದ್ದಾರೆ. ಅದೂ ಕೂಡ, ಇಂಗ್ಲೀಷರ ಸೆರೆಯ ಸರಳುಗಳ ಹಿಂದೆ ಇದ್ದುಕೊಂಡು!

ಇಂಥಾ ಬದಲಾವಣೆಯ ಅದೃಷ್ಟ ಒಬ್ಬ ವ್ಯಕ್ತಿಯ ಪಾಲಿಗೆ ಒದಗಿ ಬಂದಿದೆ ಎಂದರೆ ಅದು ಸುಮ್ಮನೆ ಆಗಿರಲಿಕ್ಕಿಲ್ಲ. ಮುಂದೊಂದು ದಿನ ಏನೋ ಸಂಭವಿಸುವ ಸಲುವಾಗಿಯೇ ಈಗ ಇದು ಘಟಿಸುತ್ತಿದೆ. ಈ ಮಾತಿಗೆ ಬೆಂಬಲವಾಗಿ ನಾನು ಇಂದು ನಾಲ್ಕು ಘಟನೆಗಳನ್ನು ವಿವರಿಸುತ್ತೇನೆ. ಜಗತ್ತಿನ ದೂರದ ತುದಿಯಲ್ಲಿ ನಡೆಯುತ್ತಿರುವ ಚಟುವಟಿಕೆಗಳು ಏನನ್ನು ಸೂಚಿಸುತ್ತದೆ ಎಂದು ಅರಿಯುವ ಪ್ರಯತ್ನ ಇದಾಗಲಿದೆ.

ಮೊದಲನೆಯದಾಗಿ, ಭಾರತದಲ್ಲಿ ಇತ್ತೀಚೆಗೆ ರಾಷ್ಟ್ರೀಯ ಪಕ್ಷವೊಂದು ವ್ಯಾಪಕವಾಗಿ ಹಬ್ಬತೊಡಗಿದೆ. ಕೆಲವೇ ವರ್ಷಗಳ ಹಿಂದೆ ಅಲ್ಲಿ ಒಂದಷ್ಟು ಜನರರು ಮಾತ್ರ ಪ್ರತ್ಯೇಕ ಗುರುತು ಅಥವಾ ಸ್ವಾತಂತ್ರ್ಯವನ್ನು ಬಯಸುತ್ತಿದ್ದರು. ಅವರಲ್ಲಿ ಕೆಲವರು ತೀವ್ರವಾದಿಗಳೂ ಮತಾಂಧರೂ ಇದ್ದರು. ಪ್ರಜ್ಞಾವಂತ ಮುಂದಾಳುಗಳು ಹೋಮ್ ರೂಲ್ ಅಥವಾ ಬ್ರಿಟಿಷ್ ಸಾಮ್ರಾಜ್ಯದೊಳಗೇ ಡೊಮಿನಿಯನ್ ಸ್ಟೇಟಸ್ ಸಿಕ್ಕರೆ ಸಾಕೆನ್ನುವ ಚಿಂತನೆ ನಡೆಸಿದ್ದರು. ಜನಸಾಮಾನ್ಯರು ಈ ಬಗ್ಗೆ ಏನೇನೂ ತಿಳಿಯದೆ ಅಥವಾ ಈ ಕುರಿತು ಹೆಚ್ಚು ತಲೆ ಕೆಡಿಸಿ ಕೊಳ್ಳದೆ ತಮ್ಮ ಪಾಡಿಗೆ ಇರುತ್ತಿದ್ದರು.

ಆದರೆ ಇಂದು ಬ್ರಿಟಿಷ್ ಆಡಳಿತದಿಂದ ವಿಮೋಚನೆಗೊಳ್ಳಬೇಕೆನ್ನುವ ಕೂಗು ಕಾಳ್ಗಿಚ್ಚಿನಂತೆ ಭಾರತದಾದ್ಯಂತ ಹಬ್ಬತೊಡಗಿದೆ.

ಈಗಿನ ಸಂದರ್ಭದಲ್ಲಿ ಭಾರತದ ಕೆಲವು ರಾಜರುಗಳು, ಆಗರ್ಭ ಶ್ರೀಮಂತರು, ರಾಜಪರಿವಾರ, ಸರ್ಕಾರಿ ಹುದ್ದೆಯಲ್ಲಿರುವವರು ಮತ್ತು ಸಾಕಷ್ಟು ಸಂಖ್ಯೆಯ ನೌಕರರು ಆಡಳಿತ ವ್ಯವಸ್ಥೆಯಲ್ಲಿ ಯಾವುದೇ ಬದಲಾವಣೆಯನ್ನು ಬಯಸುತ್ತಿಲ್ಲ ಎಂಬುದು ಸತ್ಯವೇ. ಅವರು ತಮ್ಮದೇ ಆದ ಕಾರಣಗಳಿಂದಾಗಿ ಬ್ರಿಟಿಷರಿಗೆ ಎಲ್ಲ ಬಗೆಯ ಸಹಕಾರವನ್ನೂ ನೀಡುತ್ತಿರುವರು. ಆದರೆ ಈ ಸಂಖ್ಯೆ ಎಲ್ಲರನ್ನೂ ಒಗ್ಗೂಡಿಸಿದರೆ, ಹೆಚ್ಚೆಂದರೆ ಹತ್ತು ಲಕ್ಷದಷ್ಟು ಇರಬಹುದು. ಉಳಿದಂತೆ ಒಂದು ದೊಡ್ಡ ವರ್ಗವೇ ಇಂದು ಸ್ವಾತಂತ್ರ್ಯದ ಮಾತಾಡತೊಡಗಿದೆ. ಒಂದೆಡೆ ಸಾಮಾಜಿಕ ಬಹುಮನ್ನಣೆಯ ರಬೀಂದ್ರನಾಥ ಟಾಗೋರರಂಥವರು, ಮತ್ತೊಂದೆಡೆ ಅಸ್ಪೃಷ್ಯರೆನಿಸಿಕೊಂಡ ವರ್ಗದವರು ಸರಿಸಮಾನವಾಗಿ ಬ್ರಿಟಿಷ್ ಹಿಡಿತದಿಂದ ಹೊರಬರಬೇಕು ಅನ್ನುವ ಬಲವಾದ ಇಚ್ಛೆಯ ಕಿಚ್ಚನ್ನು ಹೊತ್ತಿಸುತ್ತಿದ್ದಾರೆ.

ನೆನಪಿಡಿ, ಭಾರತದ ಇಂದಿನ ಜನಸಂಖ್ಯೆ ಮುವ್ವತ್ತು ಕೋಟಿಗೂ ಹೆಚ್ಚಿದೆ. ಇದು ವಿಶ್ವದ ಒಟ್ಟು ಜನಸಂಖ್ಯೆಯ ಐದನೇ ಒಂದು ಭಾಗದಷ್ಟು. ಈ ರಾಷ್ಟ್ರೀಯ ಚಳವಳಿ ಇದ್ದಕ್ಕಿದ್ದಂತೆ ಯಾಕೆ ಇಷ್ಟು ಮಹತ್ವ ಪಡೆಯುತ್ತಿದೆ ಎಂಬುದನ್ನು ನಾವು ಈಗ ಊಹಿಸಬಹುದು. ಭಾರತದಲ್ಲಿ ಈಗ ಮೂಡಿರುವ ಸಂಚಲನೆಯು, ಅದರಲ್ಲಿ ಪಾಲ್ಗೊಂಡಿರುವ ಜನಸಂಖ್ಯೆಯ ಕಾರಣದಿಂದ ಹೆಚ್ಚಿನ ಮಹತ್ವ ಪಡೆಯುತ್ತಿದ್ದು, ವಿಶ್ವಜೀವನದ ಕೇಂದ್ರ ವಿದ್ಯಮಾನವಾಗಿ ಪರಿಣಮಿಸಿದೆ.

ಎರಡನೆಯದಾಗಿ ; ಗಾಂಧಿಯವರ ಹೆಸರು ಕೀರ್ತಿಗಳು ವೇಗಗತಿಯಲ್ಲಿ ಪ್ರವರ್ಧಮಾನಕ್ಕೆ ಬರುವಲ್ಲಿ ಆ ದೇಶದ ಜನರ ಆಶೋತ್ತರಗಳ ಕೊಡುಗೆ ಮುಖ್ಯವಾಗುತ್ತದೆ. ಭಾರತದ ಜನರು ಸದ್ಯಕ್ಕೆ ತಮ್ಮ ಸ್ವಾತಂತ್ರ್ಯ ಹೋರಾಟದ ನಾಯಕನಾಗಿ ಗಾಂಧೀಜಿಯನ್ನೆ ಆಯ್ದುಕೊಂಡಿದ್ದಾರೆ, ಅವರ ಮೇಲೆ ಭರವಸೆ ಇಟ್ಟಿದ್ದಾರೆ. ಕೆಲವೇ ವರ್ಷಗಳ ಹಿಂದೆ ಗಾಂಧೀಜಿ ಇಂಗ್ಲೆಂಡಿನ ಮಿತ್ರರಾಗಿದ್ದರು ಹಾಗೂ ಭಾರತದಲ್ಲಿ ರಾಣಿಯ ಆಳ್ವಿಕೆಯನ್ನು ಒಪ್ಪಿಕೊಂಡಿದ್ದರು. ಬ್ರಿಟನ್ ಸರ್ವಾಧಿಪತ್ಯದ ಲಾಭಗಳನ್ನೂ ಕೊಡುಗೆಗಳನ್ನೂ ಅನುಭವಿಸಿದ್ದರು. ಮಹಾಯುದ್ಧದ ಸಂದರ್ಭದಲ್ಲಿಯೂ ಅವರು ಬ್ರಿಟಿಷ್ ಮಿತ್ರಕೂಟವನ್ನು ಬೆಂಬಲಿಸಿದ್ದರು ಹಾಗೂ ಪ್ರತಿ ಬಾರಿಯೂ ಬ್ರಿಟನ್ ಸಾಮ್ರಾಜ್ಯದ ಪರವಾಗಿಯೇ ನಿಂತಿದ್ದರು. ಯುದ್ಧಾನಂತರ ಅವರು ಹೋಮ್ ರೂಲಿಗಿಂತ ಹೆಚ್ಚಾಗಿ ಸುಧಾರಣಾ ಕಾರ್ಯಗಳನ್ನು ತೀವ್ರವಾಗಿ ಪ್ರತಿಪಾದಿಸಿದ್ದರು.

ಹಾಗಾದರೆ ಗಾಂಧೀಜಿ ಬದಲಾಗಿದ್ದೆಲ್ಲಿ? ಈ ಪ್ರಶ್ನೆಗೆ ಉತ್ತರ ಹುಡುಕುತ್ತ ಹೋದರೆ ನಾವು ಜನರಲ್ ಡೈಯರ್ ನ ಎದುರು ನಿಲ್ಲುತ್ತೇವೆ. ಜನರಲ್ ಡೈಯರ್ ಅಮೃತಸರದ ಜಲಿಯನ್ ವಾಲಾ ಬಾಗ್ ನಲ್ಲಿ 1919 ರ ಏಪ್ರಿಲ್ 18 ರಂದು ಹೋರಾಟಕ್ಕಾಗಿ ಸೇರಿದ್ದ ಮುಗ್ಧ ಭಾರತೀಯರ ಮೇಲೆ ಗುಂಡಿನ ಮಳೆಗರೆಯುವ ಆದೇಶ ಹೊರಡಿಸಿದ. ಇದರ ಪರಿಣಾಮವಾಗಿ ನಾನೂರಕ್ಕೂ ಹೆಚ್ಚು ಮಂದಿ ಅಲ್ಲಿ ಹತ್ಯೆಗೀಡಾಗಿದ್ದರು. ಮುದುಕರು, ಹೆಂಗಸರು, ಮಕ್ಕಳೂ ಸೇರಿದಂತೆ ಅಲ್ಲಿ ಸೇರಿದ್ದ ಬಹುಪಾಲು ಜನರು ಸಾಮೂಹಿಕ ಹತ್ಯಾಕಾಂಡಕ್ಕೆ ಬಲಿಯಾದರು. ಈ ಘಟನೆ ಗಾಂಧೀಜಿಯವರನ್ನು ಇನ್ನಿಲ್ಲದಂತೆ ಕಾಡಿತು ಮತ್ತು ಪರಿಣಾಮವಾಗಿ ಅವರ ಚಿಂತನಾ ಧಾಟಿ ಬದಲಾತು. ಅವರು ಸ್ವಾತಂತ್ರ ಚಳವಳಿಯ ಚುಕ್ಕಾಣಿ ಹಿಡಿದುಕೊಂಡರು. ಆ ದಿನದಿಂದ ಅವರು ಇಂಗ್ಲೆಂಡ್ ಸರ್ಕಾರದ ನೇರ ಎದುರಾಳಿಯಾದರು.

ಒಂದು ವರ್ಷದ ಕೆಳಗೆ ಅಖಿಲ ಭಾರತೀಯ ಕಾಂಗ್ರೆಸ್ ಪಕ್ಷವು ಗಾಂಧೀಜಿಯ ಅಹಿಂಸಾ ಚಳವಳಿ ಹಾಗೂ ಅಸಹಕಾರ ಚಳವಳಿಗೆ ಅನುಮೋದನೆ ನೀಡಿತ್ತು. ಕೇವಲ ಮೂರು ತಿಂಗಳ ಹಿಂದೆ, ಅಂದರೆ ಕಳೆದ ಡಿಸೆಂಬರ್ ನಲ್ಲಿ ಕಾಂಗ್ರೆಸ್ ಪುನಃ ಈ ಚಳವಳಿಗಳನ್ನು ಮತ್ತಷ್ಟು ಬೆಂಬಲ ಹಾಗೂ ಉತ್ಸಾಹಗಳೊಡನೆ ಕೈಗೆತ್ತಿಕೊಂಡಿತು ಹಾಗೂ ಗಾಂಧೀಜಿಯನ್ನು ತನ್ನ ಸ್ವಾತಂತ್ರ್ಯ ಹೋರಾಟದ ನಾಯಕನೆಂದು ಘೋಷಿಸಿತು. ಈ ವ್ಯಕ್ತಿ ಇಂದು ತನ್ನ ದೇಶದ ಜನಗಳ ಭವಿಷ್ಯವನ್ನು ಅಕ್ಷರಶಃ ತನ್ನ ಕೈಯಲ್ಲಿ ಹಿಡಿದು ಸಾಗುತ್ತಿದ್ದಾರೆ.

ಗಾಂಧಿ ಮಾತನಾಡಿದರೆ ಅದು ಭಾರತ ಮಾತಾಡಿದಂತೆ. ಗಾಂಧಿ ನಡೆಸುವ ಚಟುವಟಿಕೆ, ಅದು ಭಾರತದ ಚಟುವಟಿಕೆ. ಗಾಂಧಿಯನ್ನು ಬಂಧಿಸಿ ಸೆರೆಯಲ್ಲಿಟ್ಟರೆ ಇಡಿಯ ಭಾರತ ತಳಮಳಿಸುತ್ತದೆ ಮತ್ತು ಪ್ರತಿಕ್ರಿಯಿಸುತ್ತದೆ. ಈವರೆಗೆ ನಾನು ಬಲ್ಲ ಇನ್ಯಾವುದೇ ವ್ಯಕ್ತಿಗಿಂತ ಹೆಚ್ಚು ಈ ಮನುಷ್ಯ ಜನಸಾಮಾನ್ಯರೆಲ್ಲರ ಆತ್ಮಗಳ ವ್ಯಕ್ತಾವತಾರ ಎಂದೇ ನಾನು ನಂಬಿಕೊಳ್ಳುತ್ತೇನೆ.

ಮೂರನೆಯದಾಗಿ; ಗಾಂಧೀಜಿಯ ಚಳವಳಿಗಳು ಇಷ್ಟು ವ್ಯಾಪಕವಾಗಿ ಸುದ್ದಿಯಾಗುವಲ್ಲಿ ಬ್ರಿಟಿಷ್ ಸರ್ಕಾರದ ಕೆಲವು ದಮನಕಾರಿ ನೀತಿಗಳೂ ಕಾರಣವಾಗಿವೆ. ಯಾವುದೇ ಸರ್ಕಾರ ಯಾಕಾದರೂ ದಬ್ಬಾಳಿಕೆ ನಡೆಸಬೇಕು? ಅದು ಕೂಡ ಸ್ವಾತಂತ್ರ್ಯದ ಕೂಗು



ಭಾರತೀಯರು ಬ್ರಿಟಿಷರಿಗೆ ನಿಷ್ಠರಾಗಿದ್ದುದೇ ಆಗಿದ್ದಲ್ಲಿ ರಾಜಕುಮಾರರ ಭೇಟಿಯ ಅಗತ್ಯವೇ ಇರುತ್ತಿರಲಿಲ್ಲ. ಕೆಲವೊಮ್ಮೆ ಸನ್ನಿವೇಶಕ್ಕೆ ತಕ್ಕಂತೆ ಯೋಜಿತ ಕಾರ್ಯಗಳು ವ್ಯತಿರಿಕ್ತ ಪರಿಣಾಮವನ್ನೆ ಬೀರುತ್ತವೆ.

ವೇಲ್ಸ್ ರಾಜಕುಮಾರನ ಪ್ರಯಾಣದ ಅಧಿಕೃತ ಘೋಷಣೆ ಹೊರಡುತ್ತಲೇ ಗಾಂಧಿ ಭಾರತದಲ್ಲಿ ಬಹಿಷ್ಕಾರ ಚಳವಳಿಗೆ ಕರೆ ನೀಡಿದರು. ಅವರು ಇದನ್ನು ಸಾಮ್ರಾಜ್ಯದ ಮುಗ್ಧ ಯುವ ಪ್ರತಿನಿಧಿಯ ವಿರುದ್ಧವಾಗಿಯೇನೂ ಆಯೋಜಿಸಲಿಲ್ಲ. ಆದರೆ ಇಂಗ್ಲಿಷ್ ಆಡಳಿತಕ್ಕೆ ಭಾರತೀಯರ ಪ್ರತಿಕ್ರಿಯೆಯನ್ನು ದಾಖಲಿಸಲು ಅವರು ಹೋದ ಕಡೆಯಲ್ಲೆಲ್ಲ ಸ್ಥಳೀಯರು ಉಡಾಫೆ ಕಣ್ಣುಗಳಿಂದ ಬರ ಮಾಡಿಕೊಂಡಿದ್ದಲ್ಲದೆ, ಬೆನ್ನು ತಿರುಗಿಸಿ ನಡೆದು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ಕೊನೆಯದಾಗಿ ಅಲಹಾಬಾದಿನಲ್ಲಿ ಅವರು ರಾಜಕುಮಾರನನ್ನು ಭೇಟಿಯಾಗಲಿಕ್ಕೆ ಕೂಡ ನಿರಾಕರಿಸಿಬಿಟ್ಟರು. ರಾಜಕುಮಾರ ಈ ನಗರವನ್ನು ಪ್ರವೇಶಿಸಿದಾಗ ಒಂದು ಮೃತ ನಗರವನ್ನು ಪ್ರವೇಶಿಸಿದಂತೆ ಆಗಿತ್ತು. ರಸ್ತೆಗಳು ನಿರ್ಜನವಾಗಿದ್ದವು. ಪ್ರತಿ ಮನೆಯ ಬಾಗಿಲೂ ಮುಚ್ಚಿಕೊಂಡಿದ್ದವು. ಕಿಟಕಿಗಳನ್ನು ಮುಚ್ಚಿ ಪರದೆ ಹಾಕಿಕೊಂಡಿದ್ದರು. ನಗರದ ಹೊರ ವಲಯದಲ್ಲಿ ಒಂದಷ್ಟು ಪ್ರತಿಭಟನಾಕಾರರು ಸ್ವರಾಜ್ಯದ ಘೋಷಣೆ ಕೂಗುತ್ತಿದ್ದರು. ಇಡಿಯ ನಗರ ನಿಶ್ಚಲವಾಗಿ, ನಿರ್ಜೀವವಾದಂತೆ ತೋರುತ್ತಿತ್ತು.

ವೇಲ್ಸ್ ರಾಜಕುಮಾರನ ಭೇಟಿಯ ಸಂದರ್ಭದ ಈ ಪ್ರತಿಭಟನೆಯು ಸ್ವಾತಂತ್ರ್ಯದ ಕುರಿತಾಗಿ ಭಾರತೀಯರ ಚಡಪಡಿಕೆಯನ್ನು ಸ್ಪಷ್ಟವಾಗಿ ಧ್ವನಿಸಿತ್ತು. ಎಲ್ಲಕ್ಕಿಂತ ಹೆಚ್ಚಾಗಿ, ಜಗತ್ತಿಗೆ ಗಾಂಧೀಜಿ ಹಾಗೂ ಅವರ ಅನುಯಾಯಿಗಳ ಸಾಮರ್ಥ್ಯವನ್ನು ಪರಿಚಯಿಸಿತ್ತು.

ಆಕರ: ' ಗ್ಲೋಬಲ್ ಇಂಪಾರ್ಟೆನ್ಸ್ ಆಫ್ ಮಹಾತ್ಮಾಗಾಂಧಿ ' ಮಿನಿಸ್ಟರ್ ಆಫ್ ದ ಕಮ್ಯುನಿಟಿ ಚರ್ಚ್, ನ್ಯೂಯಾರ್ಕ್ ಸಿಟಿ- ಫ್ರೆಂಡ್ಸ್ ಆಫ್ ಫ್ರಿಡಮ್ ಫಾರ್ ಇಂಡಿಯಾದ ವತಿಯಿಂದ ಪ್ರಕಟಿತ ಕಿರುಹೊತ್ತಿಗೆ..

**ಸಂಗ್ರಹ : ರವಿಚಂದ್ರ ಜಗಣ್ಣವರ್**

ಎದ್ದಿರುವ ಸಂದರ್ಭದಲ್ಲಿ ಸರ್ಕಾರಗಳು ಹೆಚ್ಚು ದಬ್ಬಾಳಿಕೆ ನಡೆಸತೊಡಗಿದಷ್ಟೂ ಜನರ ಪ್ರತಿರೋಧ ತೀವ್ರಗೊಳ್ಳುತ್ತ ಹೋಗುವುದು. ಅದ್ಯಾಕೆ ಈ ಸರ್ಕಾರಗಳು ಜನಸಮೂಹದ ಮಾನಸಿಕತೆಯ ಇತಿಹಾಸವನ್ನು ಮರೆಯುತ್ತವೆಯೋ ಅರ್ಥವಾಗೋದಿಲ್ಲ. ತುಳಿದಷ್ಟೂ ಸಮೂಹವು ಚಿಮ್ಮಿ ಬರುತ್ತವೆ ಅನ್ನುವುದನ್ನು ಅವು ಮರೆತುಬಿಡುತ್ತವೆ. ಈಗಾಗಲೇ ಇಂಗ್ಲೆಂಡ್ ಹಲವೆಡೆಗಳಲ್ಲಿ ದಮನಕಾರಿ ನೀತಿಯನ್ನು ಲಾಗೂ ಮಾಡಲು ಹೋಗಿ ವಿಫಲಗೊಂಡಿದೆ. 1775 ರಲ್ಲಿ ಇದು ಅಮೆರಿಕದಲ್ಲಿ ವಿಫಲಗೊಂಡಿತು.1920 ರ ಹಾಗೂ 1940 ರ ದಶಕಗಳಲ್ಲಿ ಇದು ಇಂಗ್ಲೆಂಡಿನ ಆಂತರಿಕ ಆಡಳಿತದಲ್ಲಿಯೇ ವಿಫಲವಾಯ್ತು. ಸೌತ್ ಆಫ್ರಿಕಾದಲ್ಲಿಯೂ ಬೋಎರ್/ಯುದ್ಧದ ನಂತರ ವಿಫಲವಾಯ್ತು. ನೆನ್ನೆ ಐರ್ಲೆಂಡಿನಲ್ಲಿ ವಿಫಲಗೊಂಡ ಈ ನೀತಿ ನಾಳೆ ಭಾರತದಲ್ಲೂ ವೈಫಲ್ಯ ಕಾಣುತ್ತದೆ.

ದಮನಕಾರಿ ಪ್ರಭುತ್ವ ಎಲ್ಲಿಯಾದರೂ ಯಶಸ್ಸು ಕಾಣುತ್ತಿದೆ ಎಂದಾದರೆ, ಅದು ಶತ್ರುಗಳ ಹೋರಾಟವನ್ನು ಜಾಹೀರುಗೊಳಿಸುವಲ್ಲಿ, ಅಷ್ಟೇ!

“ನಾವು ನಮ್ಮ ಪ್ರೀತಿಯ ಗೆಳೆಯರಿಂದಾಗಿ ಜಾಹೀರುಗೊಂಡೆವು” ಅನ್ನುತ್ತಾನೆ ಷೇಕ್ಸ್ ಪಿಯರ್ . ನಾವು ಅದನ್ನೇ ನಮ್ಮ ಶತ್ರುಗಳ ಹೋರಾಟದ ಕುರಿತು ಹೇಳಬೇಕಾಗುತ್ತದೆ. ಇಂಗ್ಲೆಂಡಿನ ನೀತಿಗಳಿಗೆ ಭಾರತೀಯರ ಪ್ರತಿರೋಧವೇ ದೊಡ್ಡ ಸುದ್ದಿಯಾಗಿ, ಆ ಮೂಲಕ ಇಂಗ್ಲೆಂಡು ಜಾಹೀರುಗೊಳ್ಳುತ್ತಿದೆ. ಈ ಮೂಲಕ ಭಾರತೀಯರು ಜಗತ್ತಿನ ಗಮನವನ್ನೂ ಅನುಕಂಪವನ್ನೂ ಸೆಳೆಯತೊಡಗಿದ್ದಾರೆ. ಸ್ವತಃ ಭಾರತೀಯರೇ ಪ್ರಯತ್ನಿಸಿದ್ದರೆ ಇಷ್ಟು ವ್ಯಾಪಕ ಪ್ರಚಾರ ಸಿಗುತ್ತಿತ್ತೋ ಇಲ್ಲವೋ, ಇಂಗ್ಲೆಂಡಿನ ನೀತಿಗಳು ಅಂಥ ವೇದಿಕೆ ಒದಗಿಸಿಕೊಡುತ್ತಿವೆ.

ಇತ್ತೀಚಿನ ಉದಾಹರಣೆಗಳನ್ನೆ ಗಮನಿಸಿ ನೋಡಿ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಅಲಿ ಸಹೋದರರ ಬಂಧನವಾದಾಗ ಈ ಸುದ್ದಿ ಜಗತ್ತಿನ ಮೂಲೆಮೂಲೆಯಲ್ಲಿರುವ ಮುಸ್ಲಿಂ ದೇಶಗಳನ್ನು ತಲುಪಿತು ಮತ್ತು ಪ್ರತಿಯೊಬ್ಬ ಮುಸ್ಲಿಮನೂ ಭಾರತದ ಸ್ವಾತಂತ್ರ್ಯಕ್ಕಾಗಿ ತುಡಿಯುವಂತೆ ಮಾಡಿತು. ಲಾಲಾ ಲಜಪತರಾಯರನ್ನು ಬಂಧಿಸಿ ಸೆರೆಮನೆಯಲ್ಲಿ ಇರಿಸಿದಾಗ ಸಾವಿರಾರು ಇಂಗ್ಲಿಷ್ ಹಾಗೂ ಅಮೆರಿಕನ್ ಬುದ್ಧಿಜೀವಿಗಳು ಸೆಟೆದು ನಿಂತರು. ಏಕೆಂದರೆ ಲಜಪತರಾಯರ ಪಾಂಡಿತ್ಯದ ಅರಿವು ಈ ಜನರಿಗಿತ್ತು. ಅವರ ವ್ಯಕ್ತಿತ್ವದ ಬಗ್ಗೆ ಜಗತ್ತು ತಿಳಿದಿತ್ತು.

ಹಾಗೆಯೇ ಇದೀಗ ಗಾಂಧೀಜಿಯ ಸರದಿ. ಇಂದು ಲಕ್ಷಾಂತರ ಜನ ಗಾಂಧೀಜಿಯ ಬಗ್ಗೆ ತಿಳಿದಿದ್ದಾರೆ. ಅವರನ್ನು ನಂಬಿಕೊಂಡಿದ್ದಾರೆ. ನಾಳೆ ಅವರನ್ನು ಆರಾಧಿಸತೊಡಗುತ್ತಾರೆ. ಸಾಮ್ರಾಜ್ಯಶಾಹಿಯ ವಿರುದ್ಧ ಸಂತನೊಬ್ಬ ಜೀವ ಪಣಕ್ಕಿಟ್ಟು ಹೋರಾಟಕ್ಕೆ ಇಳಿದಿದ್ದಾನೆಂದು ಅವರು ಭಾವಿಸುತ್ತಿದ್ದಾರೆ.

ಕೊನೆಯದಾಗಿ, ಇತ್ತೀಚಿನ ದಿನಗಳಲ್ಲಿ ಏನು ನಡೆಯುತ್ತಿದೆ ಎಂಬುದನ್ನು ಗಮನಿಸಲಿಕ್ಕಾಗಿ ನಾನು ಒಂದು ನಿದರ್ಶನವನ್ನು ಹೇಳುತ್ತೇನೆ. ಕೆಲ ತಿಂಗಳುಗಳ ಹಿಂದೆ ವೇಲ್ಸ್ ರಾಜಕುಮಾರ ಭಾರತಕ್ಕೆ ಭೇಟಿ ನೀಡಿದ್ದರು. ಈ ಘಟನೆಗೆ ಹೋಲಿಕೆ ನೀಡಲು ನನಗೇನೂ ತೋಚುತ್ತಿಲ್ಲ. ಬ್ರಿಟಿಷ್ ರಾಜಸತ್ತೆಗೆ ಭಾರತೀಯರೆಷ್ಟು ನಿಷ್ಠರಾಗಿದ್ದಾರೆ ಅನ್ನುವುದನ್ನು ನಿರೂಪಿಸಲು ಈ ಭೇಟಿಯನ್ನು ಆಯೋಜಿಸಲಾಗಿದೆಯೆಂದು ನಮಗೆ ಹೇಳಲಾಗಿತ್ತು. ಹಾಗೇನಾದರೂ

# ಗಾಂಧಿವಾದಿ ಬಳ್ಳಾರಿ ಸಿದ್ಧಮ್ಮ

ಸ್ವಾತಂತ್ರ್ಯ ಹೋರಾಟವೆಂದರೆ ಕೇವಲ ರಾಷ್ಟ್ರಮಟ್ಟದಲ್ಲಿ ಮಾತ್ರ ಆಗಿದ್ದಲ್ಲ. ಬೇರು ಗಟ್ಟಿಯಾಗಿದ್ದರೆ ತಾನೇ ಮರ ಗಟ್ಟಿಯಾಗಿರುವುದು? ಅಂಥಹ ಬೇರುಮಟ್ಟದಲ್ಲಿ ನಿಸ್ವಾರ್ಥತೆಯಿಂದ ಚಳುವಳಿ ಕಟ್ಟಿದ ಸಿದ್ಧಮ್ಮನವರಂಥ ಗ್ರಾಮೀಣ ಭಾಗದ ಅಪ್ಪಟ ಗಾಂಧೀವಾದಿಗಳ ಕೊಡುಗೆಯೂ ಸ್ವಾತಂತ್ರ್ಯ ಹೋರಾಟಕ್ಕೆ ಸಾಕಷ್ಟಿದೆ. ಎಲೆಮರೆಯ ಕಾಯಿಯಂಥ ಇಂಥ ನಿಸ್ವಾರ್ಥ ಗಾಂಧೀವಾದಿಗಳನ್ನು ನೆನೆಯದಿದ್ದರೆ ಸ್ವಾತಂತ್ರ್ಯಕ್ಕೆ ಅಪಚಾರ ಎಸಗಿದಂತಾಗುತ್ತದೆ. ಜೀವನದುದ್ದಕ್ಕೂ ತಮಗಾಗಿ ಏನೂ ಮಾಡಿಕೊಳ್ಳದೆ ದೇಶಕ್ಕಾಗಿ ಜೀವ ತೇಯ್ದ ಕರ್ನಾಟಕದ ಹೆಮ್ಮೆ – ಬಳ್ಳಾರಿ ಸಿದ್ಧಮ್ಮನವರು.

ರವಿಚಂದ್ರ ಜಗಣ್ಣವರ್



'ಇಪ್ಪತ್ತನೆಯ ಶತಮಾನದ ಭಾರತದಲ್ಲಿ ಶತಮಾನಗಳಿಂದ ನಾನಾ ಬಗೆಯ ಸಾಮಾಜಿಕ ಕೆಟ್ಟ ಪದ್ಧತಿಗಳು, ಅಂತರಗಳು, ಅಮಾನವೀಯ ರಿವಾಜುಗಳು ಜೇಡನ ಬಲೆಯಂತೆ ಕಟ್ಟಿಕೊಂಡಿದ್ದವು. ಅವುಗಳಲ್ಲಿ 'ಸ್ತ್ರೀ ಮುಕ್ತಿ' ಯ ಸಮಸ್ಯೆಯೂ ಒಂದು. ಸ್ತ್ರೀ ಸ್ವಾತಂತ್ರ್ಯದ ಬೇಡಿಕೆಯನ್ನು ರಾಜಕೀಯ – ಸಾಮಾಜಿಕ ಕ್ಷೇತ್ರಗಳಲ್ಲಿ ಜಾರಿಗೆ ತಂದ ಕಾರ್ಯ ಮಾಡಿದ ಮೊದಲ ವ್ಯಕ್ತಿಯೆಂದರೆ ಮಹಾತ್ಮ ಗಾಂಧಿಯವರು. ತಮ್ಮ ಎಲ್ಲ ರಾಜಕೀಯ ಸಾಮಾಜಿಕ ಹೋರಾಟಗಳಲ್ಲಿ ಸ್ತ್ರೀಯರಿಗೆ ಸ್ಥಾನ ಅವಕಾಶಗಳನ್ನು ಕೊಟ್ಟು, ಕೆಲವೊಮ್ಮೆ ಅವರನ್ನೇ ಮುಂದಿಟ್ಟು, ಅವರ ಶಕ್ತಿ, ಸಾಮರ್ಥ್ಯ, ಸ್ವಾತಂತ್ರ್ಯದ ಮೇಲೆ ಬಿದ್ದ ಬಂಡೆಗಲ್ಲನ್ನು ಸರಿಸಿದವರು 'ಗಾಂಧಿ' ಮಹಾತ್ಮ ಗಾಂಧೀಜಿಯವರ ಆಪ್ತರಾದ ಸ್ವಾತಂತ್ರ್ಯ ಹೋರಾಟಗಾರ ಆಚಾರ್ಯ ಕೃಪಲಾನಿಯವರ ಈ ಮಾತನ್ನು ಪ್ರಮಾಣೀಕರಿಸುವಂತೆ ಗಾಂಧೀಜಿಯವರ ಪ್ರಭಾವಕ್ಕೊಳಗಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಇಳಿದು ತಮ್ಮ ತನು–ಮನ–ಧನ ಅರ್ಪಿಸಿದವರು ಬಳ್ಳಾರಿ ಸಿದ್ಧಮ್ಮನವರು.

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರು ಕೂಡ ಹೋರಾಟದ ಮುಂಚೂಣಿಯಲ್ಲಿದ್ದರು. ಭಾರತವು ಸಂಪ್ರದಾಯಸ್ಥ ಸಮಾಜದ ಬುನಾದಿಯ ಮೇಲೆ ನಿಂತಿದ್ದು ಪುರುಷ ಪ್ರಧಾನ ಸಮಾಜವಾದುದರಿಂದ ಮಹಿಳೆಯನ್ನು ಅಬಲೆ, ಅಶಕ್ತಳು, ಎಂದೆಲ್ಲ ಹೀಗಳೆಯುವುದನ್ನು ನೋಡಿದ್ದೇವೆ. ಆದರೆ ಉಲ್ಲಾಳದ ರಾಣಿ ಅಬ್ಬಕ್ಕದೇವಿ, ಕಿತ್ತೂರುರಾಣಿ ಚನ್ನಮ್ಮ, ಒನಕೆ ಓಬವ್ವ, ಬೆಳವಾಡಿ ಮಲ್ಲಮ್ಮ, ಕೆಳದಿ ಮತ್ತು ಇಕ್ಕೇರಿ ಸಂಸ್ಥಾನದ ರಾಣಿ ಚೆನ್ನಮ್ಮಾಜಿ ಹೀಗೆ ಹಲವಾರು ವೀರ ವನಿತೆಯರು ಇಂಥಹ ಸಂಪ್ರದಾಯವಾದಿಗಳ ಪೂರ್ವಾಗ್ರಹ ಮನಸ್ಥಿತಿಯನ್ನು ಮೆಟ್ಟಿ ನಿಂತು ಹೆಸರುವಾಸಿಯಾಗಿದ್ದಾರೆ. ಇದರ ಹತ್ತರಷ್ಟು ಮಹಿಳೆಯರು ಪರೋಕ್ಷವಾಗಿ ಹೋರಾಟ ಮಾಡಿದ್ದಾರೆ. ಆದರೆ ಅವರು ಬೆಳಕಿಗೆ ಬಾರದಿರಬಹುದು. ಸ್ವಾತಂತ್ರ್ಯ ಹೋರಾಟದಲ್ಲಿ ಕೋಟ್ಯಾಂತರ ಮಂದಿ ಹೋರಾಡಿದ್ದಾರೆ. ಕೆಲವರು ಬೆಳಕಿಗೆ ಬಂದರೆ ಮತ್ತೆ ಕೆಲವರು ಬೆಳಕಿಗೆ ಬರಲಿಲ್ಲ. ಕೆಲವರು ಕರ್ನಾಟಕ ಏಕೀಕರಣದಲ್ಲಿ ಹಾಗೂ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದು ಸ್ವಾತಂತ್ರ್ಯಾನಂತರ ಫಲಾಪೇಕ್ಷೆಯಿಲ್ಲದೆ ತೆರೆಯ ಮರೆಗೆ ಸರಿದದ್ದೂ ಉಂಟು. ಅಂತಹವರಲ್ಲಿ ಪ್ರಮುಖ ಮಹಿಳೆ ಎಂದರೆ 'ಬಳ್ಳಾರಿ ಸಿದ್ದಮ್ಮನವರು.

**ಜನನ ಮತ್ತು ಬಾಲ್ಯ :**

ಬಳ್ಳಾರಿ ಸಿದ್ದಮ್ಮನವರು ಈಗಿನ ಹಾವೇರಿ ಜಿಲ್ಲೆ ಶಿಗ್ಗಾಂವಿ ತಾಲೂಕಿನ ದುಂಡಸಿ ಗ್ರಾಮದ ಸಂಪ್ರದಾಯಸ್ಥ ಲಿಂಗಾಯತ ಸಮುದಾಯದ ಕುಟುಂಬದಲ್ಲಿ 1903ರಲ್ಲಿ ಜನಿಸಿದರು. ಇವರ ತಂದೆ ತಾಯಂದಿರು ಬಸೆಟಪ್ಪ ಮತ್ತು ಶಿವಮ್ಮ. ಬಸೆಟಪ್ಪ(ಬಸಪ್ಪ)ನವರು ಮಧ್ಯಮ ಪ್ರಮಾಣದ ವ್ಯಾಪಾರಸ್ಥರು. ಸಂಪ್ರದಾಯಸ್ಥ ಕುಟುಂಬವಾದ್ದರಿಂದ ಇವರ ಮನೆಯಲ್ಲಿ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವ ಪದ್ದತಿ ಇರಲಿಲ್ಲ. ಅವರ ಕಲಿಕೆ ಏನಿದ್ದರೂ ಮನೆಯ ನಾಲ್ಕು ಗೋಡೆಗಳ ಮಧ್ಯೆಯೆ ಇರಬೇಕಾಗಿತ್ತು. ಸಿದ್ದಮ್ಮಳಿಗೆ ಕಲಿಯಬೇಕೆಂಬ ಇಚ್ಛೆಯಿದ್ದರೂ ತಂದೆ ತಾಯಿ ಅದಕ್ಕೆ ವಿರೋಧ ಮಾಡಿದರು. ಪಾಲಕರಿಗೆ ತಿಳಿಯದಂತೆ ನಾಲ್ಕನೆಯ ತರಗತಿವರೆಗೆ ವ್ಯಾಸಂಗ ಮಾಡಿದ ಸಿದ್ದಮ್ಮನವರಿಗೆ ಪ್ರಾಪ್ತ ವಯಸ್ಸಿಗೆ ಬರುತ್ತಲೇ ಬಳ್ಳಾರಿಯ ಮುರುಗೆಪ್ಪನವರೊಂದಿಗೆ ಮದುವೆ ಮಾಡಲಾಯಿತು. ಮುರುಗೆಪ್ಪನವರದ್ದು ತಕ್ಕಮಟ್ಟಿಗೆ ಸ್ಥಿತಿವಂತ

ಮನೆತನವಾದ್ದರಿಂದ ದಾಂಪತ್ಯ ಜೀವನ ಸುಖಮಯವಾಗಿ ಸಾಗಿತ್ತು. ಮನೆಯಲ್ಲಿ ಯಾವುದಕ್ಕೂ ಕೊರತೆ ಇರಲಿಲ್ಲ.

**ಮಹಾತ್ಮ ಗಾಂಧೀಜಿಯವರ ಪ್ರಭಾವ :**

ಮನೆಯಲ್ಲಿ ಸುಖವಿದ್ದರೂ ಸಿದ್ಧಮ್ಮನವರ ಮನಸ್ಸಿಗೆ ಸುಖವಿರಲಿಲ್ಲ. ದೇಶಕ್ಕಾಗಿ ಏನಾದರೂ ಮಾಡಬೇಕೆಂಬ ಹಂಬಲ ತುಡಿಯುತ್ತಿತ್ತು. ಇದೇ ಕಾಲಕ್ಕೆ ಇವರ ಅದೃಷ್ಟ ಎಂಬಂತೆ ಮಹಾತ್ಮ ಗಾಂಧೀಜಿಯವರ ನೇತೃತ್ವದಲ್ಲಿ ರಾಷ್ಟ್ರೀಯ ಆಂದೋಲನವು ಇಡೀ ದೇಶವನ್ನು ವ್ಯಾಪಿಸಿತ್ತು. ಸಿದ್ಧಮ್ಮನವರಿಗೆ ಮಹಾತ್ಮ ಗಾಂಧಿಯವರೆಂದರೆ ಅಪಾರ ಭಕ್ತಿ ಮತ್ತು ಗೌರವ. 1920ರಲ್ಲಿ ಅಸಹಕಾರ ಚಳುವಳಿ, 1930ರಲ್ಲಿ ಉಪ್ಪಿನ ಸತ್ಯಾಗ್ರಹಗಳು ಭಾರತೀಯರಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹೊತ್ತಿಸಿದ ಆ ಸಮಯದಲ್ಲಿ ವಿದ್ಯಾವಂತರಲ್ಲದಿದ್ದರೂ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧಮ್ಮನವರ ಮನಸ್ಸು ಸಿದ್ಧವಾಯಿತು. ತಿಲಕರ ಕೇಸರಿ, ಮರಾಠಿ ಪತ್ರಿಕೆಗಳು ಅವರ ಮೇಲೆ ಗಾಢ ಪ್ರಭಾವ ಬೀರಿದವು. ಮಹಾತ್ಮ ಗಾಂಧೀಜಿಯವರನ್ನು ನೋಡಿರದಿದ್ದರೂ ಅವರ ಪ್ರಭಾವ ಮುರುಗೆಪ್ಪ ಮತ್ತು ಸಿದ್ಧಮ್ಮ ದಂಪತಿಗಳ ಮೇಲೆ ಬಿದ್ದಿತು. ಸಿದ್ದಮ್ಮನವರಿಗೆ ಗಾಂಧೀಜಿಯವರನ್ನು ನೋಡಬೇಕು, ಆ ಮಹಾತ್ಮನೊಂದಿಗೆ ಮಾತನಾಡಬೇಕು, ಅವರು ಎಲ್ಲಿ ಇರುತ್ತಾರೆ? ಎಲ್ಲಿ ಸಿಗುತ್ತಾರೆ? ಎಂಬ ಕುತೂಹಲ ಉಂಟಾಗತೊಡಗಿತು. ಗಾಂಧೀಜಿಯವರನ್ನು ನೋಡಬೇಕೆಂದರೆ ವಾರ್ಧಾದ ಅವರ ಆಶ್ರಮಕ್ಕೆ ಹೋದರೆ ಸಿಗುತ್ತಾರೆ ಎಂದು ಅವರಿಗೆ ತಿಳಿಯಿತು. ಅಲ್ಲಿಗೆ ಹೋಗಿ ಬರಲು ಹಣ ಬೇಕು. ಕೆಲವು ಕಾಲ ಅಲ್ಲಿಯೇ ತಂಗಬೇಕು. ಇವೇ ಮುಂತಾದ ಪ್ರಶ್ನೆಗಳು ಬಂದಾಗ ಉತ್ತರ ಸಿದ್ದಮ್ಮನವರಲ್ಲಿತ್ತು. ಮನಸ್ಸಿದ್ದರೆ ಮಾರ್ಗ ಇದ್ದೇ ಇದೆ. ನಾನು ಹೋಗಿಯೇ ತೀರುತ್ತೇನೆ ಎಂದು ಶಪಥ ಮಾಡಿ ಮಹಾತ್ಮನೆಡೆಗೆ ಹೊರಟರು.

**ಗಾಂಧೀಜಿಯವರ ಆಶ್ರಮದಲ್ಲಿ ಸಿದ್ದಮ್ಮನವರು :**

ಗಾಂಧೀಜಿಯವರನ್ನು ನೋಡಲೇಬೇಕು ಅವರೊಂದಿಗೆ ಮಾತನಾಡಲೇಬೇಕು ಎಂಬ ಹಂಬಲ ಹೊತ್ತ ಸಿದ್ಧಮ್ಮನವರು ಗುಜರಾತಿನ ವಾರ್ಧಾ ಆಶ್ರಮದ ಕಡೆಗೆ ಪ್ರಯಾಣ ಬೆಳೆಸಿದರು. ಗಾಂಧೀಜಿಯವರನ್ನು ನೋಡಿ ಅವರೊಂದಿಗೆ ಮಾತನಾಡಿದರು. ಗಾಂಧೀಜಿಯವರ ಪ್ರಭಾವ ಸಿದ್ದಮ್ಮನವರ ಮೇಲೆ ಅಪಾರವಾಗಿ ಆಯಿತು. ಆಶ್ರಮದಲ್ಲಿದ್ದ ಸಮಯದಲ್ಲಿ ಸ್ವಚ್ಛತಾ ಕೆಲಸ ಅಂದರೆ ಕಸಗುಡಿಸುವುದು, ಪಾತ್ರೆ ತೊಳೆಯುವುದು, ದವಸ ದಾನ್ಯಗಳಲ್ಲಿರುವ ಕಲ್ಲು, ಕಡ್ಡಿ ತೆಗೆಯುವುದು, ಹಿತಮಿತವಾದ ಭೋಜನ, ಬೆಳಿಗ್ಗೆ ನಿತ್ಯಕರ್ಮಗಳಾದ ಮೇಲೆ ದೇವರ ಪ್ರಾರ್ಥನೆ, ಭಜನೆ ಇವೇ ಮುಂತಾದವು ಕಡ್ಡಾಯವಾಗಿತ್ತು. ರಾಷ್ಟ್ರೀಯ ನಾಯಕರುಗಳಾದ ಸರ್ದಾರ್ ವಲ್ಲಭಬಾಯಿ ಪಟೇಲ್, ರಾಜಗೋಪಾಚಾರಿ, ಕಾಮರಾಜ್ ಇವರೇ ಮುಂತಾದವರನ್ನು ಕಾಣುವ ಭಾಗ್ಯ ಸಿದ್ಧಮ್ಮನವರಿಗೆ ದೊರೆಯಿತು. ತಾನೂ ಸಹ ಅಂತಹ ನಾಯಕಿಯಾಗಬೇಕೆಂಬ ಹಂಬಲ ಸಿದ್ದಮ್ಮನವರಲ್ಲಿ ಮೂಡಿತು. ಸ್ವಾತಂತ್ರ್ಯಕ್ಕಾಗಿ ತಮ್ಮನ್ನು ಅರ್ಪಿಸಿಕೊಳ್ಳಬೇಕು ಎಂದು ತೀರ್ಮಾನಿಸಿದರು.

**ಸ್ವಾತಂತ್ರ್ಯ ಹೋರಾಟದಲ್ಲಿ ಬಳ್ಳಾರಿ ಸಿದ್ಧಮ್ಮನವರು**

ಅಂದಿನ ಮೈಸೂರು ಪ್ರಾಂತ್ಯವು ನಾಲ್ಕಾರು ಕಡೆ ಹರಿದು ಹಂಚಿಹೋಗಿತ್ತು. ಒಂದೆಡೆ ಕರ್ನಾಟಕದ ಏಕೀಕರಣಕ್ಕಾಗಿ ಹೋರಾಟ ನಡೆಯುತ್ತಿದ್ದರೆ ಮತ್ತೊಂದೆಡೆ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಯುತ್ತಿತ್ತು. ಉತ್ತರ ಕರ್ನಾಟಕ ಭಾಗದಲ್ಲಿ, ಹಳೆ ಮೈಸೂರು ಭಾಗದಲ್ಲಿ ಬ್ರಿಟಿಷರ ಹಾಗೂ ಆಳರಸರ ವಿರುದ್ಧ ಬಿರುಸಿನ ಚಳವಳಿ ನಡೆಯುತ್ತಿತ್ತು. ರಾಷ್ಟ್ರೀಯ ಆಂದೋಲನದಲ್ಲಿ ಕರ್ನಾಟಕದ ಮಹಿಳೆಯರೂ ಕೂಡ ಭಾಗವಹಿಸಿ ಚಳುವಳಿ ಮಾಡಿರುವ ಕೆಲವರನ್ನು ಮಾತ್ರ ಇಲ್ಲಿ ಹೆಸರಿಸಬಹುದು. ಅವರುಗಳೆಂದರೆ– 1. ಕಮಲಾದೇವಿ ಚಟ್ಟೋಪಾಧ್ಯಾಯ(ಮಂಗಳೂರು) 2.ಉಮಾಬಾಯಿ ಕುಂದಾಪುರ(ಹುಬ್ಬಳ್ಳಿ) 3.ಬಳ್ಳಾರಿ ಸಿದ್ದಮ್ಮ(ಹಾವೇರಿ) 4.ನಾಗಮ್ಮ ಪಾಟೀಲ(ಹುಬ್ಬಳ್ಳಿ) 5.ಯಶೋಧರಮ್ಮ ದಾಸಪ್ಪ(ಬೆಂಗಳೂರು)

ಇವರುಗಳಲ್ಲಿ ಯಶೋಧರಮ್ಮನವರು ಮತ್ತು ಬಳ್ಳಾರಿ ಸಿದ್ದಮ್ಮನವರು ಮುಂಚೂಣಿಯಲ್ಲಿದ್ದು ಚಳುವಳಿಗಾರರನ್ನು ಹುರಿದುಂಬಿಸುತ್ತಿದ್ದರು. ಪೋಲಿಸರಿಗೆ ಹೆದರದೆ ಭಾಷಣ ಮಾಡುತ್ತಿದ್ದರು.

ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ ಜಿಲ್ಲೆಗಳಲ್ಲಿ ನಡೆಯುತ್ತಿದ್ದ ಚಳುವಳಿಗಳು, ಹರತಾಳಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಶ್ರೀಯುತರುಗಳಾದ ಎಸ್.ನಿಜಲಿಂಗಪ್ಪ, ಟಿ.ಸಿದ್ದಲಿಂಗಯ್ಯ, ಕೆ.ಎಸ್.ಪಾಲ್ ಅವರು ಹಾಗೂ ಇನ್ನಿತರ ಮುಖಂಡರು ಚಳುವಳಿಯನ್ನು ಹಬ್ಬಿಸುತ್ತಿದ್ದರು. ಸಿದ್ದಮ್ಮನವರು ಈ ನಾಯಕರುಗಳಿಗೆ ಸಾತ್ ನೀಡುತ್ತಿದ್ದರು.

**ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ಸಿದ್ಧಮ್ಮನವರ ಪಾತ್ರ :**

ಪ್ರತಿಯೊಬ್ಬ ವ್ಯಕ್ತಿಗೂ ಜೀವನದಲ್ಲಿ ಒಂದು ಅವಕಾಶ ಸಿಕ್ಕೇ ಸಿಗುತ್ತದೆ. ಅದನ್ನು ಸದುಪಯೋಗಪಡಿಸಿಕೊಳ್ಳಬೇಕು ಇಲ್ಲದಿದ್ದರೆ ಅದು ಕೈತಪ್ಪಿ ಹೋಗುತ್ತದೆ. ಅಂತಹ ಒಂದು ಅವಕಾಶ ಸಿದ್ದಮ್ಮನವರಿಗೆ ಲಭಿಸಿತು. ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಶಿವಪುರದಲ್ಲಿ ನಡೆದ ಧ್ವಜಸತ್ಯಾಗ್ರಹ ಸಿದ್ದಮ್ಮನವರಿಗೆ ನಾಯಕಿಯಾಗುವ ಅಂಥದ್ದೊಂದು ಸುವರ್ಣಾವಕಾಶವನ್ನು ತಂದೊಡ್ಡಿತು.

ಸ್ವಾತಂತ್ರ್ಯ ಹೋರಾಟಗಾರು ಇಡೀ ರಾಜ್ಯದಲ್ಲಿ ಪ್ರಥಮ ಬಾರಿಗೆ ಕಾಂಗ್ರೆಸ್ ಧ್ವಜವನ್ನು ಸಾರ್ವಜನಿಕವಾಗಿ ಧ್ವಜಾರೋಹಣ ಮಾಡಲು ಒಂದು ಸ್ವಾಗತ ಸಮಿತಿಯನ್ನು ರಚಿಸಿಕೊಂಡರು. ಇದೊಂದು ಭಾರೀ ಪ್ರಮಾಣದ ಸಭೆಯಾದುದರಿಂದ ಹೆಚ್ಚಾಗಿ ಹಣಕಾಸಿನ ಅಗತ್ಯವಿದ್ದಿತು. ಆ


ಮದ್ದೂರು ಬಳಿಯ ಶಿವಪುರ ಧ್ವಜ ಸತ್ಯಾಗ್ರಹ ಸೌಧ

ಕಾರಣದಿಂದಾಗಿಯೇ ಸಾಹುಕಾರ್ ಚನ್ನಯ್ಯನವರನ್ನು ಸ್ವಾಗತ ಸಮಿತಿ ಅಧ್ಯಕ್ಷರನ್ನಾಗಿ ಮಾಡಿದರು. ಹೆಚ್.ಕೆ.ವೀರಣ್ಣಗೌಡರು ಕಾರ್ಯದರ್ಶಿಗಳು, ಕೊಪ್ಪದ ಜೋಗಿಗೌಡರನ್ನು ಖಜಾಂಚಿಯನ್ನಾಗಿಯೂ, ಎಂ.ಎನ್.ಜೋಯಿಸ್ ಅವರನ್ನು ಜಿ.ಓ.ಸಿ.ಯನ್ನಾಗಿ ನೇಮಕ ಮಾಡಿರುವುದಾಗಿ ಪ್ರಕಟಿಸಿದರು. ಶಿವಪುರದಲ್ಲಿ ತಿರುಮಲೇಗೌಡರ ಜಾಗದಲ್ಲಿ ಧ್ವಜಾರೋಹಣ ಮಾಡಲು ತೀರ್ಮಾನಿಸಿದರು. ಸಭೆ ನಡೆಯುವ ಒಂದು ವಾರ ಮೊದಲೇ ಹೆಚ್.ಸಿ.ದಾಸಪ್ಪ, ಯಶೋಧರ ದಾಸಪ್ಪ, ಬಳ್ಳಾರಿ ಸಿದ್ದಮ್ಮ, ತಾಯಮ್ಮ ವೀರಣ್ಣಗೌಡ, ವೆಂಕಮ್ಮ ಸೀತಾರಾಮಯ್ಯ, ಇಂದಿರಾಬಾಯಿ ಕೃಷ್ಣಮೂರ್ತಿ ಇನ್ನೂ ಮುಂತಾದ ನಾಯಕರು ಶಿವಪುರಕ್ಕೆ ಬಂದಿಳಿದರು. ಮಹಿಳೆಯರು ಒಂದೊಂದು ತಂಡಗಳನ್ನಾಗಿ ಮಾಡಿಕೊಂಡು ಹಳ್ಳಿಗಳಿಗೆ ತೆರಳಿ ಗ್ರಾಮಗಳ ಮಹಿಳೆಯರು ಚಳವಳಿಯಲ್ಲಿ ಭಾಗವಹಿಸುವಂತೆ ಹುರಿದುಂಬಿಸುತ್ತಿದ್ದರು.

ಸಿದ್ದಮ್ಮನವರು ಬಳ್ಳಾರಿಯಿಂದ ಶಿವಪುರದಂತಹ ಹಳ್ಳಿಗೆ ಬಂದು ಜನರನ್ನು ಹುರಿದುಂಬಿಸುತ್ತಿರುವುದನ್ನು ನೋಡಿದ ಜನ ಸ್ವಇಚ್ಛೆಯಿಂದ ಚಳುವಳಿಗೆ ಧುಮುಕಿದರು. ಹೆಚ್.ಕೆ.ವೀರಣ್ಣಗೌಡ, ಹೆಚ್.ಸಿ.ದಾಸಪ್ಪ, ಸಾಹುಕಾರ್ ಚನ್ನಯ್ಯ ಇನ್ನೂ ಮುಂತಾದವರು ಟಿ. ಸಿದ್ದಲಿಂಗಯ್ಯನವರನ್ನು ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿದರು. ಇಂದಿನ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಶಿವಪುರದಲ್ಲಿ 1938 ರ ಏಪ್ರಿಲ್ 11, 12 ಹಾಗೂ 13 ರಂದು ಕಾಂಗ್ರೆಸ್ ಧ್ವಜವನ್ನು ಹಾರಿಸಲು ತೀರ್ಮಾನಿಸಿದರು. ಇದನ್ನು ಶಿವಪುರ ರಾಷ್ಟಕೂಟವೆಂದು ಕರೆದರು. 1938 ಏಪ್ರಿಲ್ 11ನೇ ತಾರೀಖು ಶಿವಪುರದಲ್ಲಿ ಮೂವತ್ತು ಸಾವಿರ ಜನ ಸೇರಿದರು. ಜಿಲ್ಲಾ ಮ್ಯಾಜಿಸ್ಟೇಟರಾದ ಜಿ. ಎಂ. ಮೇಕ್ರಿಯವರು ಶಿವಪುರ ಸುತ್ತಮುತ್ತ ಧ್ವಜಾರೋಹಣ ಮಾಡದಂತೆ ನಿಷೇಧಾಜ್ಞೆಯನ್ನು ಜಾರಿಗೆ ತಂದರು. 11ನೇ ತಾರೀಖು ಟಿ. ಸಿದ್ದಲಿಂಗಯ್ಯನವರನ್ನು ಮೆರವಣಿಗೆಯಲ್ಲಿ ಕರೆತರಲಾಯಿತು. ಟಿ ಸಿದ್ದಲಿಂಗಯ್ಯನವರು ಧ್ವಜಾರೋಹಣ ಮಾಡಲಾಗಿ ಅವರನ್ನು ಬಂಧಿಸಿ ಜಿಲ್ಲಾ ನ್ಯಾಯಾಲಯಕ್ಕೆ ಕರೆದುಕೊಂಡು ಹೋದರು. ಸ್ತ್ರೀ ಮುಖಂಡರು ವೇದಿಕೆಯ ಮೇಲೆ ಕುಳಿತಿದ್ದರು. ಸಿದ್ದಲಿಂಗಯ್ಯನವರು ತರುವಾಯ ಹೆಚ್.ಸಿ.ದಾಸಪ್ಪನವರು, ಎಂ.ಎಸ್.ಜೋಯಿಸ್, ಯಶೋಧರ ದಾಸಪ್ಪನವರು, ನಂತರ ಬಳ್ಳಾರಿ ಸಿದ್ದಮ್ಮನವರು ಧ್ವಜಾರೋಹಣ ಮಾಡಿದರು. ಇವರುಗಳನ್ನು ಬಂಧಿಸಿ ಮಂಡ್ಯದ ಜಿಲ್ಲಾ ನ್ಯಾಯಾಲಯಕ್ಕೆ ಕರೆದೊಯ್ದರು. ಬಳ್ಳಾರಿ ಸಿದ್ದಮ್ಮನವರಿಗೆ ಜೈಲು ಶಿಕ್ಷೆಯಾಯಿತು.

**ವಿದುರಾಶ್ವತ್ಥ ಧ್ವಜಸತ್ಯಾಗ್ರಹದಲ್ಲಿ ಸಿದ್ದಮ್ಮನವರು :**



ಶಿವಪುರದಲ್ಲಿ ನಡೆದ ಧ್ವಜಸತ್ಯಾಗ್ರಹವು ಚಳುವಳಿಗಾರರಿಗೆ ಸ್ಫೂರ್ತಿಯಾಯಿತು. ತಮ್ಮ ತಮ್ಮ ಪಟ್ಟಣಗಳಲ್ಲಿ ಧ್ವಜಾರೋಹಣ ಮಾಡಲು ಜನ ಮುಂದಾದರು. ಅದೇ ರೀತಿ ಕರ್ನಾಟಕದ 'ಜಲಿಯನ್ ವಾಲಾಭಾಗ್' ಎಂದೇ ಪ್ರಸಿದ್ಧವಾದ ಕೋಲಾರ ಜಿಲ್ಲೆ ಗೌರಿಬಿದನೂರಿನ ವಿದುರಾಶ್ವತ್ಥ ಎಂಬಲ್ಲಿ 1938 ರ ಏಪ್ರಿಲ್ 20 ರಿಂದ 25 ರ ವರೆಗೆ ಧ್ವಜ ಸತ್ಯಾಗ್ರಹ ಏರ್ಪಾಡಾಯಿತು. ಶಿವಪುರ ರಾಷ್ಟಕೂಟದ ಪ್ರಭಾವದಿಂದಾಗಿ ಬಳ್ಳಾರಿ ಸಿದ್ದಮ್ಮನವರು ಸೇರಿದಂತೆ ಕೆಲವು ಮಹಿಳಾ ಮುಖಂಡರು ವಿದುರಾಶ್ವತ್ಥಕ್ಕೆ ಬಂದಿಳಿದು ಧ್ವಜಾರೋಹಣ ಮಾಡಿದರು. ಜಿಲ್ಲಾ ಮ್ಯಾಜಿಸ್ಟೇಟರ ಆಜ್ಞೆಯಂತೆ ಪೋಲಿಸರು ಚಳುವಳಿಕಾರರ ಮೇಲೆ ಗುಂಡು ಹಾರಿಸಿದರು. ಕೆಲವರು ಅಸುನೀಗಿದರು. ಗರ್ಭಿಣಿ ಸ್ತ್ರೀಯೊಬ್ಬಳು ಈ ಗೋಲಿಬಾರ್ನಲ್ಲಿ ಅಸುನೀಗಿದಳು ಎಂದು ಸುಳ್ಳು ಸುದ್ದಿ ಹರಡಿತು. ಜನ ರೊಚ್ಚಿಗೆದ್ದು ದಾಂಧಲೆ ನಡೆಸಿದರು. ಇದು ರಾಷ್ಟ್ರೀಯ ಸುದ್ದಿಯಾಯಿತು. ಮಹಾತ್ಮ ಗಾಂಧಿಯವರು ಈ ವಿಷಯದ ಸತ್ಯಾಂಶವನ್ನು ತಿಳಿದು ಬರುವಂತೆ ಆಚಾರ್ಯ ಕೃಪಲಾನಿ ಮತ್ತು ಸರ್ದಾರ್ ವಲ್ಲಭಭಾಯಿ ಪಟೇಲರನ್ನು ಕಳುಹಿಸಿಕೊಟ್ಟರು. ಅಹಿಂಸಾತ್ಮಕವಾಗಿ ನಡೆಯುತ್ತಿದ್ದ ಈ ಸತ್ಯಾಗ್ರಹ ಪೋಲಿಸರ ಅಟ್ಟಹಾಸದಿಂದ ಹಿಂಸಾ ರೂಪಕ್ಕೆ ತಿರುಗಿ ಸುಮಾರು 32 ಜನ ಹೋರಾಟಗಾರರು ಹುತಾತ್ಮರಾದರು.

**ಭಾರತ ಬಿಟ್ಟು ತೊಲಗಿ (ಕ್ವಿಟ್ ಇಂಡಿಯಾ) ಚಳವಳಿಯಲ್ಲಿ ಭಾಗಿ :**

ಗಾಂಧೀಜಿಯವರ ನೇತೃತ್ವದಲ್ಲಿ 1942 ರಲ್ಲಿ ನಡೆದ 'ಬಾರತ ಬಿಟ್ಟು ತೊಲಗಿ' ಚಳ ವಳಿಯಲ್ಲಿಯೂ ಕೂಡ ಬಳ್ಳಾರಿ ಸಿದ್ಧಮ್ಮನವರು ಸಕ್ರಿಯವಾಗಿ ಭಾಗವಹಿಸಿದರು. ಭೂಗತ ಹೋರಾಟಗಾರರಿಗೆ ಸಕಲ ಸಹಾಯಗಳನ್ನೂ ಮಾಡಿದರು. ಬ್ರಿಟಿಷರ ಕೆಂಗಣ್ಣಿಗೆ ಗುರಿಯಾಗಿ ಜೈಲುವಾಸವನ್ನು ಕೂಡ ಅನುಭವಿಸಿದರು. ಜೈಲುವಾಸ ಅನುಭವಿಸಿ ಬಂದ ನಂತರ ಹಳ್ಳಿ ಹಳ್ಳಿಗಳಲ್ಲಿ ನೇಯ್ಗೆ, ಗ್ರಾಮೋದ್ಯೋಗಗಳ ಮಹತ್ವವನ್ನು ಜನರಿಗೆ ಮನವರಿಕೆ ಮಾಡಿದರು . ಈ ನಿಟ್ಟಿನಲ್ಲಿ ಗ್ರಾಮೀಣಾಭಿವೃದ್ಧಿಯತ್ತ ತಮ್ಮ ಗಮನ ಹರಿಸಿದರು. ಮೈಸೂರು ಚಲೋ ಚಳುವಳಿಯಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದ ಮೊದಲ ಮಹಿಳೆ ಎಂಬ ಹೆಗ್ಗಳಿಕೆ ಇವರದ್ದು.

**ರಾಜಕೀಯ ಜೀವನ :**

ಸ್ವಾತಂತ್ರ್ಯ ನಂತರ ಸಿದ್ಧಮ್ಮನವರು ಸಮಾಜಸೇವೆ ಮಾಡುವ ಅದಮ್ಯ ಇಚ್ಛೆಯೊಂದಿಗೆ ಸಕ್ರಿಯ ರಾಜಕಾರಣಕ್ಕೆ ಧುಮುಕಿದರು. ದಾವಣಗೆರೆಯ ವಿಧಾನಸಭಾ ಮತಕ್ಷೇತ್ರದಿಂದ ಭರ್ಜರಿ ಜಯಗಳಿಸಿದರು. ದಾವಣಗೆರೆಯಿಂದ ಆಯ್ಕೆಯಾದ ಮೊದಲ ಮಹಿಳಾ ಶಾಸಕಿಯಾಗಿ ಎನಿಸಿದರು. ಗ್ರಾಮೀಣ ಭಾಗದ ಮಹಿಳೆಯರ ಆರೋಗ್ಯವನ್ನು ಕಾಪಾಡುವ ಹಿತದೃಷ್ಟಿಯಿಂದ 'ಮಾತೃ ಮಂದಿರ'ವನ್ನು ಸ್ಥಾಪಿಸಿದರು. ತಮ್ಮ ಬದುಕಿನ ಕೊನೆಯವರೆಗೂ ಮಹಿಳೆಯ ಹಿತ ಕಾಪಾಡುವುದು ಸಿದ್ಧಮ್ಮನವರ ನಿಲುವು ಆಗಿತ್ತು. ಗ್ರಾಮೀಣ ಭಾಗದ ಜನರ ಉದ್ಧಾರಕ್ಕಾಗಿ ತಮ್ಮ ರಾಜಕೀಯ ಜೀವನವನ್ನು ಮೀಸಲಿಟ್ಟರು.

ಇಂಥಹ ತ್ಯಾಗಜೀವಿ, ಮಹಿಳಾ ಸ್ವಾತಂತ್ರ್ಯ ಹೋರಾಟಗಾರ್ತಿ, ಕರ್ನಾಟಕದ ಗಾಂಧೀವಾದಿ ಬಳ್ಳಾರಿ ಸಿದ್ಧಮ್ಮನವರು 1982 ನೇ ಇಸವಿಯಲ್ಲಿ ಇಹಲೋಕವನ್ನು ತ್ಯಜಿಸಿ ಭಾರತದ ಮಹಿಳಾ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಮಿನುಗುವ ನಕ್ಷತ್ರವಾದರು. ■



# ಗಾಂಧೀಜಿ : ಮಹಿಳಾ ವಿಚಾರ ಧಾರೆಗಳು

ಅದೊಂದು ದಿನ ಗಾಂಧಿ ಬಂಧನಕ್ಕೆ ಒಳಗಾಗಿ ಕಾರಾಗೃಹದತ್ತ ನಡೆಯುತ್ತಿದ್ದರು. ಆಗ ಗಾಂಧೀಜಿ ಜೊತೆಗಿದ್ದ ಕಾಕಾ ಸಾಹೇಬ್ ಕಾಲೇಲ್ಕರ್ ಮಕ್ಕಳಿಗಾಗಿ ಒಂದು ಪ್ರಾಥಮಿಕ ಪುಸ್ತಕ ಬರೆಯುವಂತೆ ಕೋರಿದರು. ಗಾಂಧಿ ಅದನ್ನು ರಚಿಸಿಕೊಟ್ಟರು. ಈ ಪ್ರಾಥಮಿಕ ಪಾಠ ಗಾಂಧಿ ನಿರ್ಮಿಸಲು ಹೊರಟ ಹೊಸ ಸಮಾಜದ ಬಗ್ಗೆ ಬಹು ದೊಡ್ಡ ಒಳನೋಟ ನೀಡುತ್ತದೆ. ಕಲಿಕೆಯ ಅಗತ್ಯವನ್ನು ಅರಿಯದ, ಲಿಂಗಬೇಧ, ತಾರತಮ್ಯ ಮಾಡುವ ಹೆಣ್ಣುಮಕ್ಕಳು, ಗಂಡುಮಕ್ಕಳು ಮತ್ತು ತಂದೆತಾಯಿಯವರು ಕಲಿಯಬೇಕಾದ ಮೊದಲ ಪಾಠ ಇದು.

ಅದರಲ್ಲಿನ ಒಂದು ಪಾಠ ಹೀಗಿದೆ: ಮನೆಗೆಲಸದ ಬಗ್ಗೆ ಮಾತನಾಡುತ್ತ ತಾಯಿ, ಮಗ ಮತ್ತು ಮಗಳ ನಡುವೆ ನಡೆದ ಆ ಸಂಭಾಷಣೆ ಹೀಗಿದೆ.

**ತಾಯಿ :** 'ಮಗು, ನಿನ್ನ ಸಹೋದರಿಯ ಹಾಗೆ ನೀನೂ ಮನೆಗೆಲಸದಲ್ಲಿ ಸಹಾಯ ಮಾಡಬೇಕು'.

**ಮಗ:** 'ಅಮ್ಮ ಅವಳು ಹುಡುಗಿ, ನಾನು ಹುಡುಗ. ಹುಡುಗ ಆಟ ಆಡುತ್ತಾನೆ ಮತ್ತು ಶಾಲೆ ಕಲಿಯುತ್ತಾನೆ ಅಷ್ಟೇ'.

**ಮಗಳು:** 'ಅದ್ಹೇಗೆ? ನನಗೂ ಆಡಲು, ಕಲಿಯಲು ಇಷ್ಟ'.

**ಮಗ:** 'ಇರಬಹುದು, ಆದರೆ ತಂಗಿ ನೀನು ಮನೆಗೆಲಸ ಮಾಡಬೇಕು, ಅಲ್ಲವೇ?

**ತಾಯಿ:** 'ಗಂಡು ಹುಡುಗ ಮನೆಗೆಲಸ ಮಾಡಬಾರದೇ?'

**ಮಗ:** 'ಹುಡುಗ ಬೆಳೆದು ದೊಡ್ಡವನಾದ ಮೇಲೆ ಸಂಪಾದನೆ ಮಾಡುತ್ತಾನೆ. ಹಾಗಾಗಿ ಅವನು ಚೆನ್ನಾಗಿ ಕಲಿಯಬೇಕು'.

**ತಾಯಿ:** 'ನೀನು ತಪ್ಪು ತಿಳಿದಿದ್ದಿ ಮಗು, ಹೆಂಗಸರೂ ಮನೆಗೆ ಸಂಪಾದನೆ ಮಾಡುತ್ತಾರೆ. ನೀನು ಮನೆಗೆಲಸದಲ್ಲಿ ಕಲಿಯಬೇಕಾದದ್ದು ತುಂಬ ಇದೆ. ಮನೆಯನ್ನು ಚೊಕ್ಕವಾಗಿಡುವುದು, ಅಡುಗೆ ಮಾಡುವುದು, ಬಟ್ಟೆ ಒಗೆಯುವುದು, ಇದನ್ನು ಕಲಿಯಲು ಕೌಶಲ್ಯ ಬೇಕು, ನಿನ್ನ ಕಣ್ಣು, ಕೈ ಮತ್ತು ಬುದ್ಧಿಯ ಬಳಕೆ ಇಲ್ಲಿ ಅಗತ್ಯ. ಈ ಕೆಲಸಗಳು ನಿನ್ನನ್ನು ತಿದ್ದುತ್ತವೆ. ನಿನ್ನ ಚಾರಿತ್ರ್ಯವನ್ನು ಬೆಳೆಸುತ್ತವೆ. ಗಂಡಸರು, ಹೆಂಗಸರು ಇಬ್ಬರೂ ಮನೆಗೆಲಸ ಮಾಡುವುದರಲ್ಲಿ ಸಮಾನ ನೈಪುಣ್ಯ ಗಳಿಸಬೇಕು, ಏಕೆಂದರೆ ಮನೆ ಇಬ್ಬರಿಗೂ ಸೇರಿದ್ದು'.

ಗಾಂಧೀಜಿ ಬಹುಮುಖಿ ವ್ಯಕ್ತಿತ್ವ ಉಳ್ಳ ಚಿಂತಕರಾಗಿದ್ದು ಅವರ ಚಿಂತನೆಗಳಲ್ಲು ಸ್ತ್ರೀ ಪುರುಷ ಸಮಾನತೆ ಆಧರಿಸಿದ ಸಮ ಸಮಾಜವೂ ಕೂಡ ಒಂದಾಗಿತ್ತು.

■

---

"ಎಲ್ಲಿ ಪ್ರೀತಿ ಇದೆಯೋ ಅಲ್ಲಿ ಬದುಕಿದೆ."
~ ಮಹಾತ್ಮ ಗಾಂಧಿ





# ಯುಗ ಪ್ರವರ್ತಕ ಗಾಂಧಿ

ಗಾಂಧೀಜಿ ಜೊತೆ ಲಾರ್ಡ್ ಮೌಂಟ್ ಬ್ಯಾಟನ್

ಲಾರ್ಡ್ ಮೌಂಟ್ ಬ್ಯಾಟನ್ ರು ಬ್ರಿಟಿಷ್ ರಾಜವಂಶಕ್ಕೆ ಸೇರಿದ ನೌಕಾಧಿಕಾರಿ @ ಭಾರತದ ಕೊನೆಯ ವೈಸ್ ರಾಯ್, ತುಂಬಾ ಸುಂದರ & ಬುದ್ದಿವಂತ ತರುಣ. 1921ರಲ್ಲಿ ಪ್ರಿನ್ಸ್ ಆಫ್ ವೇಲ್ಸ್ ಭಾರತಕ್ಕೆ ಬಂದಾಗ (ಬ್ಯಾಟನ್ ರ ಚಿಕ್ಕಪ್ಪ ) ಬ್ಯಾಟನ್ ADC ಆಗಿ ಭಾರತಕ್ಕೆ ಬಂದಿದ್ದರು. ವೇಲ್ಸ್ ಭಾರತಕ್ಕೆ ಬಂದ ಕೂಡಲೇ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನಾಯಕ ರಾಷ್ಟ್ರಪಿತ ಮಹಾತ್ಮಗಾಂಧೀಜಿಯವರನ್ನು ಭೇಟಿ ಮಾಡಲು ಇಷ್ಟ ಪಟ್ಟರು. ಆದರೆ ಭೇಟಿ ಮಾಡಲಿಕ್ಕೆ ಆಗಲಿಲ್ಲ, ಯಾಕೆಂದ್ರೆ, ಆ ಸಮಯದಲ್ಲಿ Gandhi ಯಾವುದೇ ಬ್ರಿಟನ್ ರಾಜ ಕುಟುಂಬದವರಿಗೆ ಭಾರತದ ಭೇಟಿಗೆ ಬಹಿಷ್ಕಾರ ಹಾಕಿದ್ದರು. ಹೀಗಾಗಿ ಗಾಂಧಿ ಅವರನ್ನು ಭೇಟಿ ಮಾಡಲು ಆಗಲಿಲ್ಲ, ವಿಕ್ಟೋರಿಯಾ ರಾಣಿಯ grand son ಆಗಿದ್ದ ಮೌಂಟ್ ಬ್ಯಾಟನ್‌ರಿಗೆ.

ಆದರೆ ಭಾರತದ ಕಡೆಯ ವೈಸ್ ರಾಯ್ ಆಗಿಬ್ಯಾಟನ್ ರೇ ಬಂದದ್ದು ಕೂಡಾ ಒಂದು ಕೋ –ಇನ್ಸಿ ಡೆಂಟ್. ಮಹಾತ್ಮನನ್ನು ಕಂಡ್ರೆ ಮೌಂಟ್‌ರಿಗೆ ತುಂಬಾ ಗೌರವ, ಅಪಾರವಾದಂತಹ ಪ್ರೀತಿ. ಬ್ರಿಟಿಷ್ ಚಕ್ರವರ್ತಿ ಬ್ಯಾಟನ್ ಮತ್ತು ಭರತ ವರುಷದ ಅಧಿನಾಯಕ ಗಾಂಧಿ ಇವರಿಬ್ಬರ ಭೇಟಿ, ಮಾತುಕತೆ ಗೌರವಾದರ ಗಳನ್ನು ಪಟ್ಟಿ ಮಾಡುತ್ತ ಹೋದರೆ, ನಮಗೆ ಕನಿಷ್ಠ ಹತ್ತು ಪಿ ಎಚ್ ಡಿ ಗೆ ಆಗುವಷ್ಟು ಮಾಹಿತಿಗಳು ಸಿಗುತ್ತವೆ . ಕೊನೆಯದಾಗಿ..

ಬಾಪೂ ಬಗ್ಗೆ ಲಾರ್ಡ್ ಮೌಂಟ್ ಬ್ಯಾಟನ್ ಹೇಳಿದ ಮಹತ್ವದ ಸಾಲುಗಳಿವು..

“ಸಾತ್ವಿಕ ಶಕ್ತಿಯ ಈ ಅಹಿಂಸಾ ಯೋಧ, ಭಾರತದ ಮಹಾನ್ ಆತ್ಮ. ಅವರಲ್ಲಿರುವ ನೈತಿಕ ಮೌಲ್ಯಗಳು ನನ್ನ ಆತ್ಮವನ್ನೂ ಕಲಕಿವೆ. ಪ್ರತಿ ಸಲವೂ ನಾನು ನೋಡುವಾಗ ಏಸು ಕ್ರಿಸ್ತನ ಪ್ರತಿರೂಪದಂತೆ ಭಾಸವಾಗುತ್ತಿದ್ದರು ಗಾಂಧಿ. ಸಾವಿರಾರು ವರುಷಗಳ ನಂತರವೂ ಇತಿಹಾಸದಲ್ಲಿ ಗಾಂಧಿ ಹೆಸರು ಶಾಶ್ವತವಾಗಿ ಉಳಿಯಲಿದೆ. ಇದರಲ್ಲಿ ಯಾವ ಸಂಶಯವೂ ನನಗೆ ಕಾಣದು. ಇಂಡಿಯಾ ಅಷ್ಟೇ ಅಲ್ಲದೆ ವಿಶ್ವವೇ ನೆನಪು ಮಾಡಿಕೊಳ್ಳುತ್ತದೆ. ಗಾಂಧಿಯನ್ನು ಒಬ್ಬ ಯುಗ ಪ್ರವರ್ತಕ ಎಂದು ನಾನು ಕರೆಯುತ್ತೇನೆ.’ ■



ಮಹಾತ್ಮ ಗಾಂಧೀಜಿಯವರ ಎರಡನೇ ಪುತ್ರ
ಮಣಿಲಾಲ್ ಗಾಂಧಿಯವರ ಮಗ

**ಅರುಣ್ ಲಾಲ್ ಗಾಂಧಿ**

ಇತ್ತೀಚಿಗೆ ನಿಧನರಾದರು.
ಅವರ ನಿಧನಕ್ಕೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ
ಸಂತಾಪ ವ್ಯಕ್ತಪಡಿಸುತ್ತದೆ.




# ಕಸ್ತೂರ್ ಬಾ ಆಶ್ರಮದಲ್ಲಿ ಮಕ್ಕಳ ಕಲರವ ..

–ಜಿ.ಬಿ ಶಿವರಾಜು

**ಹಾ**ಸನ ಜಿಲ್ಲೆ ಅರಸೀಕೆರೆಯಲ್ಲಿರುವ ಕಸ್ತೂರ್ ಬಾ ಆಶ್ರಮ ಮಹಾತ್ಮ ಗಾಂಧೀಜಿಯವರ ಕಲ್ಪನೆಯ ಆಶ್ರಮಗಳ ಮಾದರಿಯಲ್ಲಿ ಅರಳಿರುವ ಒಂದು ಸಂಸ್ಥೆ. ಮಹಾತ್ಮ ಗಾಂಧೀಜಿಯವರ ಆಶ್ರಮದಲ್ಲಿ ನೇರವಾಗಿ ಗಾಂಧೀಜಿಯವರಿಂದಲೇ ಆಶ್ರಮ ನಿರ್ವಹಣೆ ತರಬೇತಿ ಪಡೆದ ಯಶೋದರಮ್ಮ ದಾಸಪ್ಪ ಅವರು ಅಲ್ಲಿಂದ ನೇರವಾಗಿ ಅರಸೀಕೆರೆಗೆ ಬಂದು ಕಸ್ತೂರ್ ಬಾ ಟ್ರಸ್ಟ್ ಸಂಸ್ಥೆಯ ಹೆಸರಿನಲ್ಲಿ 85 ಎಕರೆ ಪ್ರದೇಶದಲ್ಲಿ 1946 ರಲ್ಲಿ ಈ ಆಶ್ರಮವನ್ನು ಆರಂಭಿಸಿದರು. ಗ್ರಾಮೀಣ ಮಹಿಳೆಯರು ಹಾಗೂ ಹೆಣ್ಣು ಮಕ್ಕಳ ಸುಧಾರಣೆ ಈ ಆಶ್ರಮದ ಮೂಲ ಆಶಯ.ಇಲ್ಲಿ ಗಾಂಧೀಜಿಯವರ ಚಿತಾ ಭಸ್ಮ ಇದೆ. ಆಶ್ರಮಕ್ಕಾಗಿ ಹಗಲಿರುಳು ದುಡಿದು ಅಲ್ಲಿಯೇ ನಿಧನರಾದ ಯಶೋದರಮ್ಮನವರ ಸಮಾಧಿಯೂ ಇಲ್ಲಿದೆ.



ಈ ಕಸ್ತೂರ್ ಬಾ ಆಶ್ರಮದ ಬಗ್ಗೆ ಸಮಾಜಸೇವಕ ಎಂ ಸಿ ನರೇಂದ್ರ ಅವರಿಗೆ ಅಪರಿಮಿತ ಅಭಿಮಾನ. ನರೇಂದ್ರ ಅವರು ಸಮಾಜವಾದಿ ರಾಜಕಾರಣಿ ಮಾಜಿ ಸಚಿವ ಎಂ ಚಂದ್ರಶೇಖರ್ ಅವರ ಪುತ್ರ. ಗಾಂಧಿ ವಿಚಾರ ಮತ್ತು ಸರ್ವೋದಯ ಚಟುವಟಿಕೆಗಳಲ್ಲಿ ಇವರಿಗೆ ತುಂಬಾ ಆಸಕ್ತಿ . ಹಾಗೆಯೆ ಗ್ರಾಮೀಣ ಜನರ ಬಗ್ಗೆ ಇವರಿಗಿರುವ ಪ್ರೀತಿ ಕಾಳಜಿ ಅನನ್ಯವಾದದ್ದು. ಅವರ ಸಹಕಾರದಿಂದಲೇ ಕಸ್ತೂರ್ ಬಾ ಆಶ್ರಮದ ಬೆಳವಣಿಗೆಗೆ ಒಂದು ದೊಡ್ಡ ಶಕ್ತಿ ಬಂದಿದೆ. ಗಾಂಧಿ ಚಿತಾ ಭಸ್ಮ ಇರುವ ಸ್ಥಳವನ್ನು ಇವರು ರಾಜ್ ಘಾಟ್ ನಲ್ಲಿರುವ ಗಾಂಧಿ ಸಮಾದಿಯ ರೀತಿಯಲ್ಲಿ ನಿರ್ಮಿಸಲು ಪೂರ್ಣ ಹಣಕಾಸು ನೆರವು ನೀಡಿದ್ದಾರೆ. ಈಗ ಇದು ಅರಸೀಕೆರೆ ಕಸ್ತೂರ್ ಬಾ ಆಶ್ರಮದ ಪ್ರಮುಖ ಆಕರ್ಷಣೆ .

ಇವರು ಬೆಂಗಳೂರಿನಲ್ಲಿ ರಾಮಕೃಷ್ಣ ಸಮಗ್ರ ಶಿಕ್ಷಣ ಸಂಸ್ಥೆ ನಡೆಸುತ್ತಿದ್ದಾರೆ. ಇಲ್ಲಿ ಅವರು ನಡೆಸಿರುವ ಚಟುವಟಿಕೆಗಳು ಆದರ್ಶಪ್ರಾಯ. ಅವರ ನಿಸ್ವಾರ್ಥ ಸೇವೆ ಇತರರಿಗೆ ಮಾದರಿ . ಎಂ ಸಿ ನರೇಂದ್ರ ಅವರ ಮಾರ್ಗದರ್ಶನದಲ್ಲಿ ಹೆಗ್ಗೋಡಿನ ನೀನಾಸಂ ಸಂಸ್ಥೆಯಲ್ಲಿ ತರಬೇತಿ ಪಡೆದು ಬಂದು ನರೇಂದ್ರ ಅವರ ರಾಮಕೃಷ್ಣ ಸಮಗ್ರ ಶಿಕ್ಷಣ ಸಂಸ್ಥೆಯಲ್ಲಿ ಆದರ್ಶ ಶಿಕ್ಷಕರಾಗಿ ಶ್ರಮಿಸುತ್ತಿರುವ ಮಹಾಂತೇಶ್ ದೇಗಾವಿ ಅವರು ಇನ್ನೊಬ್ಬ ಸಮಾಜ ಸೇವಕರು. ಇತ್ತೀಚಿಗೆ ಇವರ ಮಾರ್ಗದರ್ಶನ ಮತ್ತು ನೇತೃತ್ವದಲ್ಲಿ ಕಸ್ತೂರ್ ಬಾ ಆಶ್ರಮದ ಮಕ್ಕಳಿಗೆ ಒಂದು ವ್ಯಕ್ತಿತ್ವ ವಿಕಸನ ಶಿಬಿರ ನಡೆಯಿತು .ನರೇಂದ್ರ ಮತ್ತು ಮಹಾಂತೇಶ್ ಹಾಗೂ ಶ್ರೀಮತಿ ಮೇರಿ ಈ ಶಿಬಿರವನ್ನು ಯಶಸ್ವಿಗೊಳಿಸಿ ನಮ್ಮೆಲ್ಲ ಚಟುವಟಿಕೆಗಳಿಗೆ ಶಕ್ತಿ ತುಂಬಿದ್ದಾರೆ. ಕಸ್ತೂರ್ ಬಾ ಆಶ್ರಮದ ಕಾರ್ಯಕಾರಿ ಸಮಿತಿ ಸದಸ್ಯರ ಸಹಕಾರ ಕೂಡ ಆಶ್ರಮಕ್ಕೆ ಒಂದು ಬಹುದೊಡ್ಡ ಶಕ್ತಿಯಾಗಿದೆ. ಅವರೆಲ್ಲರಿಗೂ ಆಶ್ರಮದ ಪರವಾಗಿ ಹೃದಯಪೂರ್ವಕ ಅಭಿನಂದನೆಗಳು. ■



---

**"ನಿನ್ನನ್ನು ನೀನು ಕಾಣಲು ಇರುವ ಅತ್ಯುತ್ತಮ ಮಾರ್ಗವೆಂದರೆ ನೀನು ಇತರರ ಸೇವೆಯಲ್ಲಿಯೇ ಕಳೆದುಹೋಗುವುದು."**

**~ ಮಹಾತ್ಮ ಗಾಂಧಿ**



# ಬುದ್ಧ



ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ ;
ಮಡದಿ ಮಗು ಮನೆ – ಮಾರು ರಾಜ್ಯ –ಗೀಜ್ಯ
ಹೊತ್ತಿರುವ ಉರಿಯಲಿ ಆಯಿತಾಜ್ಯ
ಹಿಂದೆ ಬಿದ್ದವು ಎಲ್ಲೋ ಕುದುರೆ ಕಾಲಾಳು
ಬಿಚ್ಚಿ ಉದಿರಿತು ಎಲ್ಲೋ ಮನದ ಬಾಳು
ಹೊರಟ ಹೊರಟೇ ಹೊರಟ, ಹೊರಟನೆತ್ತೋ
ಸಾಹಸಿಯ ಗೊತ್ತುಗುರಿ ಅವಗು ಗೊತ್ತೋ !

ಕಾಮ–ಕ್ರೋಧವ ದಾಟಿ, ಮದ –ಮತ್ಸರವ ತುಳಿದು
ಮೋಹ–ಲಾಭವ ಮೆಟ್ಟಿ ಅಡಿ ಕಿತ್ತಿ ಇಟ್ಟ,
ಇದೊ ತಗ್ಗು, ಅದೊ ಗುಡ್ಡ, ಆಗೋ ಮಲೆಯ ಬೆಟ್ಟ
ನೆಲ ಕೆಳಗೆ ಬಿಟ್ಟ.

ಏರಿದೆರಿದನೇರಿ ಗಾಳಿಗುದುರೆ ಸವಾರಿ
ಚಂದ್ರಕಿರಣವ ಮೀರಿ ಸೂರ್ಯನ ಸೇರಿ
ಬೆಳಕನ್ನೆ ಹಿಂದೊಗೆದು ತಮದ ಬಸಿರನೆ ಬಗೆದು
ಅಸ್ಪರ್ಶ ಅವಕಾಶದಲ್ಲಿ ಇದ್ದ.
ಬುದ್ಧ–ಬುದ್ಧ–ಬುದ್ಧ
ಶಬ್ದ–ನಾದ–ದ್ವನಿಯ ಸದ್ದ ಮೀರಿದ್ದ.
ಇಲ್ಲ ಎಂಬುವ ಕೊನೆಗೆ ಆತ್ಮ ಶುದ್ಧ
ಇದ್ದರೆನಿಲದಿದ್ದರೇನೆನಲು ಗೆದ್ದ.

ಅಲ್ಲಿಂದ ಇಲ್ಲಿವರೆ ಹೊರಳಿ ನೋಡಿ
ಇದ್ದುದಿದ್ದಂತಿತ್ತು ಜನನ–ಮರಣದ ಜೋಡಿ
ಗೆದ್ದುದೇನೆಂದೆನುತ ಮರಳಿ ಜಿಗಿದ
ಭೂತಜಾತದ ಎದೆಯ ಸೀಳಿ ಸಿಗಿದ
ಅದೇ ತನ್ನ ಮನೆಯೆಂದು ಸಿದ್ಧ ಬಗೆದ
ಬುದ್ಧನೆಂಬುವ ಜಬ್ಬ ಎಂದೊ ಇದ್ದ
ಎನುವಂತೆ ಇಂದಿಗೂ ಇಲ್ಲೇ ಇಲ್ಲ
ಬುದ್ಧ ಹುಟ್ಟಿದ ಮೇಲೆ ಹಳೆ ಜಗವು ಸತ್ತು
ಇದ್ದು ಇಲ್ಲದ ಹಾಗೆ, ಹಾಗೆ ಇತ್ತು
ಬುದ್ಧ ಸತ್ತನು ಎಂದು ಯಾರೆಂದರೂ
ಬುದ್ಧನ ಜಯಂತಿಗಿದೆ ಜಯವೆಂದಿಗೂ
ಬುದ್ಧನ ಸಮಾಧಿಯದು ಮಾನವನ ಹೃದಯ
ಅದುವೆ ಕಾಯುತ್ತಲಿದೆ ಕಲ್ಕಿ ಉದಯ

–ಅಂಬಿಕಾತನಯತ್ತ
("ಗಂಗಾವತರಣ" ಕವನಸಂಕಲನದಲ್ಲಿ ಪ್ರಕಟಿತ)



# ಬುದ್ಧ ಮೊಗೆದಷ್ಟೂ ಖಾಲಿಯಾಗದ ಕಡಲು.

– ಡಾ. ನೆಲ್ಲುಕುಂಟೆ ವೆಂಕಟೇಶ್

**ಜ**ಗದ ಮಾನಸವನ್ನು ಮತ್ತೆ ಮತ್ತೆ ಕಾಡುವ, ಅದು ಕೆಸರ ಕತ್ತಲಲ್ಲಿ ಮುಳುಗಿದಾಗಲೆಲ್ಲ ಬೆಳದಿಂಗಳ ಕೋಲಾಗಿ ಕೈ ಹಿಡಿದೆತ್ತುವ ಚೈತನ್ಯ . ಐನ್ ಸ್ಟೈನ್ ನಂಥ ವಿಜ್ಞಾನಿ ಬುದ್ಧತತ್ವ ಮನುಷ್ಯ ಲೋಕಕ್ಕೆ ಬೆಳಗು ಎಂದ. ಜಗತ್ತಿನ ಧರ್ಮಗಳಲ್ಲೆ ಹೆಚ್ಚು ತಾರ್ಕಿಕವಾದ, ವಿಜ್ಞಾನದ  ತಳಹದಿ ಗಟ್ಟಿಯಾಗಿರುವ, ಭಿನ್ನತೆಗಳನ್ನು ಗೌರವಿಸುವ, ಇರುವುದರಲ್ಲಿ ಹಂಚಿ ತಿನ್ನಲು ಹೇಳುವ, ಅನ್ಯರ ಕುರಿತು ಅಸಹ್ಯ ಪಡದ, ಒಳಗೊಳ್ಳುವಿಕೆಯನ್ನು ಪ್ರತಿಪಾದಿಸುವ, ಪ್ರೇಮವೇ ಆತ್ಯಂತಿಕ ಎಂದು ನಂಬುವ, ಕಲಿತಿದ್ದನ್ನು ಅನ್ವಯ ಮಾಡಿ ತಾಳೆ ನೋಡುವ, ಚಲನೆಯಲ್ಲಿ ನಂಬಿಕೆ ಇಟ್ಟ  ತಾರ್ಕಿಕ ತತ್ವ ಬುದ್ಧನದು. ಹಾಗಿದ್ದರೆ ಅದು ಯಾಕಿಷ್ಟೊಂದು ಅಪಾರ್ಥಗಳಿಗೆ ಒಳಗಾಗಿದೆ ? ಶಿಲೆಯಾದ ಧರ್ಮವಾಗಿ ಇತರ ಧರ್ಮಗಳಂತೆಯೆ ಯಾಕೆ ನಂಜು ಕಾರುತ್ತಿದೆ? ಓಶೋ ಒಂದು ಕಡೆ ಹೇಳುತ್ತಾರೆ, "ಬುದ್ಧನಷ್ಟು ಅಪಾರ್ಥಕ್ಕೊಳಗಾದ ವ್ಯಕ್ತಿ ಯಾರೂ ಇಲ್ಲ. ಆತ ಅಪಾರ್ಥಕ್ಕೆ ಒಳಗಾಗದೆ ಇರಲು ಸಾಧ್ಯವೂ ಇಲ್ಲ. ಯಾರು ಪ್ರಜ್ಞೆಗೆ ಅತೀತವಾದುದನ್ನು ಪ್ರಜ್ಞೆಗೆ ಲಿಂಕ್ ಮಾಡಿಕೊಂಡು ಅರಿವನ್ನು ದಾಟಿಸಬಲ್ಲರೊ ಅವರಿಗಷ್ಟೆ ಬುದ್ಧ ಅರ್ಥವಾಗಲು ಸಾಧ್ಯ. ಆತ ಸ್ಪಷ್ಟವಾಗಿ ಹೇಳಿದ್ದಾನೆ,ನಾನು ದೇವರು,ರಾಜ, ಮರ,ನದಿ, ಅಲ್ಲ. ನಾನೊಂದು ಎಚ್ಚರ ಎಂದು ". ವಾಸ್ತವದ ಕತ್ತಲಿಗೆ ಎಚ್ಚರ ಎನ್ನುವುದೊಂದು ದೊಡ್ಡ ಬಿಡುಗಡೆ. ಎಲ್ಲ ಧರ್ಮಗಳೂ ಕತ್ತಲ ಸುಖ ಬಯಸುತ್ತವೆ. ಅವಕ್ಕೆ ಅಂಧಕಾರದ ಸಂಭ್ರಮ ಬೇಕು. ಆದರೆ ಎಚ್ಚರ ಮತ್ತು ಪ್ರಜ್ಞೆಗಳು ನೀನು ಶಾಶ್ವತವಲ್ಲ ಎನ್ನುತ್ತವೆ; ಜನ್ಮ, ಕರ್ಮ ಗಳನ್ನು ಸಂದೇಹಿಸುತ್ತವೆ. ಸ್ವರ್ಗ, ನರಕಗಳನ್ನು ನಿರಾಕರಿಸುತ್ತವೆ. ರಾಜರಿಗೆ,ಪುರೋಹಿತರಿಗೆ,ಕುಲೀನರಿಗೆ ಇದು ಬೇಡ. ದ್ವೇಷ, ಒಡಕುಗಳಿದ್ದರೆ ಆಳುವವರಿಗೆ ಸಲೀಸು. ಬರ್ಮಾ,ಶ್ರೀ ಲಂಕಾದಲ್ಲಿ ಬುದ್ದ ಸತ್ತು ನಾರುತ್ತಿದ್ದಾನೆ. ನಮ್ಮಲ್ಲೂ,ಬೇರೆಲ್ಲ ಕಡೆಯೂ ವಾಸನೆ ತಪ್ಪಿಸಿಕೊಳ್ಳಲು ಊದು ಬತ್ತಿ ಹಚ್ಚೆ,ಧೂಪ ಹಾಕಿ ಸುವಾಸನೆ ಎಬ್ಬಿಸುತ್ತಿದ್ದೇವೆ.

ದುಡಿಯುವವರು, ದಲಿತರು ಬುದ್ಧನನ್ನು  ಬಿಡುಗಡೆಯ ಬೆಳಕು ಎಂದು ನಂಬಿದ್ದಾರೆ. ದುಡಿಮೆಯ ಧ್ಯಾನ ಬುದ್ಧನನ್ನು ಹತ್ತಿರ ವಾಗಿಸಿದೆ ಅವರಿಗೆ. ನಾವು ಧ್ಯಾನವನ್ನು ನಿರಾಕರಿಸುತ್ತಿದ್ದೇವೆ. ಐಷಾರಾಮಿ ಧ್ಯಾನವನ್ನು ಆರಾಧಿಸುತ್ತಿದ್ದೇವೆ. ಧ್ಯಾನದ ತುರೀಯ ಸ್ಥಿತಿ ಎಚ್ಚರ ಮತ್ತು ಕಣ್ಣು ಕೋರೈಸುವ ಬೆಳಕು. ನಾವು ಮಕ್ಕಳನ್ನೂ ಅಂಧ ಕಾರಕ್ಕೆ ಅದುಮುತ್ತಿದ್ದೇವೆ. ಬುದ್ಧತ್ವ ಎಂದರೆ ವಿಗ್ರಹ. ಇಂದು ಶಬ್ಧ.

ಇಷ್ಟಾದರೂ ಬುದ್ಧ ಅಮೂರ್ತನಲ್ಲ. ಕೈಚಾಚಿದರೆ ಹಿಡಿದೆತ್ತುವಷ್ಟು ಹತ್ತಿರದಲ್ಲಿದೆ ಅವನ ಕೈ. ಆಳದಲ್ಲಿ ಸಮಾಜವಾದಿಯಾಗಿದ್ದ ಬಾಬಾ ಸಾಹೇಬರು ಬುದ್ಧನೆಂಬ ಆದಿಮ ಸಮಾಜವಾದಿಯ ಕೈ ಹಿಡಿದು ಎದ್ದು ಬಂದರು. ಸಂಕೋಲೆಗಳಲ್ಲಿದ್ದ ಬುದ್ಧನನ್ನೂ ಬಯಲಿಗೆ ತಂದರು. ಬುದ್ಧತ್ವವನ್ನು ಬಂಗಾರದ ಕೋಳ ಎಂದವರಿಗೆ ಬೆಳಕು ಬೆಂಕಿ ಮಾತ್ರವಾಗಿ ಕಾಣುತ್ತದೆ.

ಬುದ್ಧ ,ಮಾರ್ಕ್ಸ್,ಗಾಂಧಿ ಕುರಿತ ಅದ್ಭುತ ತೌಲನಿಕ ವಿಶ್ಲೇಷಣೆಯ ಮೂಲಕ ಬಾಬಾ ಸಾಹೇಬರು, ಬುದ್ಧನ ಸಮಾಜವಾದ ಮತ್ತು ಮಾರ್ಕ್ಸ್ ನ ಸಮತಾವಾದದ ನಡುವೆ ಶೇ 80 ತಾಳೆಯಿದೆ, ಆದರೆ ಆಚರಣೆಯ ದಾರಿ ಮತ್ತು ಆಸೆಯ ತತ್ವಗಳ ದೃಷ್ಟಿಯಿಂದ ಬುದ್ಧ ತತ್ವದಲ್ಲಿ   ಹೆಚ್ಚು ಪ್ರೇಮವಿದೆ ಎಂದು ಭಾವಿಸಿದರು.

ಬುದ್ಧ  ದೇವರ ಅವತಾರವಲ್ಲ. ರಾಜಕೀಯ ಬಿಕ್ಕಟ್ಟಿನ ಶಿಶು ಎಂದು ತೋರಿಸಿದರು. ಸುಮಾರು ಎರಡು ಸಾವಿರ ವರ್ಷಗಳ ನಂತರ ಅಶ್ವಘೋಷ ಹೊದಿಸಿದ್ದ ಪೀತಾಂಬರದ ಪೊರೆಯನ್ನು ಹರಿದು ತೆಗೆದರು.

ಯಾಕೆ ಬುದ್ಧ ಇಷ್ಟೊಂದು ಕಾಡುತ್ತಿದ್ದಾನೆ ನಮ್ಮನ್ನು. ಬರಿ ನಮ್ಮನ್ನಷ್ಟೆ ಅಲ್ಲ ಶಂಕರನನ್ನೂ, ಶಂಕರನ ಪೂರ್ವ ಸೂರಿಗಳನ್ನೂ, ಕೊನೆಗೆ ಭೈರಪ್ಪನವರನ್ನೂ?  ಅದೂ ಮಹಾವೀರ

ಕಾಡದೆ ಇರುವಷ್ಟು? ಮಹಾವೀರನ ವಾರಸುದಾರರಿಗೆ, ತತ್ವಗಳಿಗೆ ದೇಶ ಬಿಟ್ಟು ಹೋಗುವ ಪರಿಸ್ಥಿತಿ ಬರಲೇ ಇಲ್ಲ. ಬುದ್ದ ತತ್ವ ಮಾತ್ರ ರಕ್ತ ಸುರಿಸುತ್ತಲೇ ಇದೆ. ಹೊರಗೆ ಹೋದ ಕಾರಣದಿಂದ ಜಗದ ಬುದ್ಧತ್ವ ಜಗದ ಮಾರ್ಗವಾಗಿದೆ. ಪಾಪ ಜಿನ ತತ್ವಕ್ಕೆ ಈ ಅದೃಷ್ಟ ಸಿಗಲಿಲ್ಲ. ಇರಲಿ ದೇಶದಿಂದ ಹೊರ ಹಾಕಿದ್ದ ಬುದ್ಧನ ಅರಿವನ್ನು ಕಲ್ಲುಗುಂಡು ಮಾಡಿ ಅಶ್ವಘೋಷ ಹೊತ್ತು ತಂದ. ಬುದ್ಧ ಎಲ್ಲರಂತಾದ. ಆದರೆ ಅರಿವೆಂಬ ಬೆಳಕಿನ ಅಲೆಯನ್ನು ಹಿಡಿದು ಶಿಲೆ ಮಾಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಆ ಸಿಟ್ಟಿಗೆ ಶಿಲೆಗೆ ಬಾಂಬು ಇಟ್ಟು ಒಡೆದು ಹಾಕಿ ಬುದ್ಧನನ್ನು ಸೋಲಿಸಿದೆವು ಎಂದು ಸಂಭ್ರಮಿಸಿದರು. ಆಗಲೂ ಬುದ್ಧನ ಕಣ್ಣಲ್ಲಿ ನೀರು ಬಂದಿದ್ದು ಕಾಣೆ. ಬುದ್ಧ ಪ್ರೀತಿಯಿಂದ ಕಾಡುತ್ತಿದ್ದಾನೆ ಪ್ರೀತಿಸುವವರಿಗೆ. ದ್ವೇಷಿಸುವವರಿಗೂ ಅವನ ಪ್ರೀತಿ ಕಾಡುತ್ತಲೇ ಇದೆ. ಎಷ್ಟೊಂದು ಶಂಕರರು ಬಂದರು,ಬುದ್ಧ ಸೋಲಲಿಲ್ಲ. ಯಾಕೆಂದರೆ ಅವನು ಸ್ಥಾವರವಲ್ಲ.

ನಮ್ಮ ಹೊಸ ತಲೆಮಾರು ಜ್ಞಾನದ ಹಂಬಲಕ್ಕೆ ಬೀಳಬೇಕು. ಅದು ಹೇಗಿರಬೇಕೆಂದು ಧರ್ಮನಂದ ಕೋಸಾಂಬಿಯವರನ್ನು(ಡಿ.ಡಿ ಕೋಸಾಂಬಿಯವರ ತಂದೆ) ನೋಡಿ ಕಲಿಯಬೇಕು. ಗೌಡ ಸಾರಸ್ವತ ಕೊಂಕಣಿ ಕುಟುಂಬದಲ್ಲಿ ಹುಟ್ಟಿ ಇವರು ಬರಿಗೈಯಲ್ಲಿ ಭರತ ಖಂಡವನ್ನೆಲ್ಲ ಬುದ್ಧನನ್ನು ಹುಡುಕಿ ಓಡಾಡುತ್ತಾರೆ. ಅನೇಕ ಸಾರಿ ಯಮನ ಕೈ ಕುಲುಕುತ್ತಾರೆ. ಆದರೂ ಬೆಳಕಿನ ಹಂಬಲ ನಿಲ್ಲುವುದಿಲ್ಲ. (ನಾನು ಅವರಂತೆ ಮನೆ ಮಾರು ,ಮಕ್ಕಳು,ಮಡದಿ ಬಿಟ್ಟು ಹೊರಡಬೇಕು ಅನ್ನುತ್ತಿಲ್ಲ. ಅರಿವಿನ ಹುಡುಕಾಟ ಅಷ್ಟೊಂದು ತ್ಯಾಗವನ್ನೇನೂ ಕೇಳುವುದಿಲ್ಲ ಈಗ).

ಕೋಸಾಂಬಿಯವರಿಗೆ ಇಂಥ ಹುಚ್ಚು ಹತ್ತಿದ್ದರೂ ಅವರ ಕೈಯಲ್ಲಿದ್ದುದು ಅಶ್ವಘೋಷ ಹಾಕಿಕೊಟ್ಟ ನಕಾಶೆಯೇ. ಅದಕ್ಕೆ ಅವರು ಭಗವಾನ್ ಬುದ್ಧ ಎನ್ನುತ್ತಾರೆ. ಆದರೆ ಅವರ ಹುಡುಕಾಟದ ತೀವ್ರತೆಗೆ ಅಶ್ವಘೋಷನ ನಕ್ಷೆ ಅನೇಕ ಸಾರಿ ಛಿದ್ರವಾಗುತ್ತದೆ. ಅಂಥ ಕಡೆ ಆರ್ಯ-ದಸ್ಯು ಕದನ,ಗಣರಾಜ್ಯಗಳ ನಾಶ, ವೈದಿಕ ಸಂಸ್ಕೃತಿಯ ವಿನಾಶಕರ ನಿಲುವುಗಳ ಬಗ್ಗೆ ಬರೆಯುತ್ತಾರೆ( ಜ್ಞಾನ ದಾಹವಿರುವ ನಮ್ಮ ಹುಡುಗರೆಲ್ಲರೂ ಶ್ರೀರಂಗರು ಅನುವಾದ ಮಾಡಿರುವ ಧರ್ಮಾನಂದ ಕೋಸಂಬೀಯವರ ಭಗವಾನ್ ಬುದ್ಧ (1956) ಪುಸ್ತಕ ಓದಲೇಬೇಕು).

ಅಂಬೇಡ್ಕರಿಗೆ ಈ ಸಮಸ್ಯೆಯಾಗಲಿಲ್ಲ. ಅವರ ಕೈಯಲ್ಲಿ ಪಶ್ಚಿಮದ ಪ್ರಕಾಶಮಾನವಾದ ದೀಪ ಇತ್ತು. ಹೆಚ್ಚು ನಿಖರವಾದ ನಕ್ಷೆಯೂ ಇತ್ತು. ಹಾಗಾಗಿ ಅವರಿಗೆ ರಾರಾಜಿಸುವ ಕಸವರದ ಗಣಿಯೇ ಸಿಕ್ಕಿತು. ಬುದ್ಧ ಮೈಕೊಡವಿ ಬಾಬಾಸಾಹೇಬರ ಬಳಿಗೆ ಬಂದ, ಬಚಾವಾದ. ಅಣುಬಾಂಬಿನ ಕತ್ತಲಲ್ಲಿದ್ದ ಐನ್ ಸ್ಟೈನ್ ಬಳಿಗೂ ನಡೆದು ಹೋದ. ಅವನ ಮುಖದಲ್ಲಿ ಭರವಸೆ ಹುಟ್ಟಿಸಿದ. ದ್ವೇಷದ ಗರಗಸ ನಮ್ಮ ಸುತ್ತ ಹಲ್ಲು ಮಸೆಯುತ್ತಿರುವಾಗ ದೇವನೂರರಿಗೆ ಬುದ್ಧ ಪ್ರೀತಿ -ಸಮತೆಯ ವಜ್ರವಾಗಿ ಕಾಣಿಸಿಕೊಂಡ.

ನನಗೆ ಅನ್ನಿಸುತ್ತಿದೆ. ಬುದ್ಧ, ದೊಡ್ಡ ಸಾಮ್ರಾಜ್ಯಗಳು ಹುಟ್ಟುವಾಗ ಬುಡಕಟ್ಟುಗಳು ಕಿತ್ತಾಡಬಾರದು ಎಂದ. ಗಣತತ್ವಕ್ಕಿಂತ ಚೆಂದದ ವ್ಯವಸ್ಥೆ ಬೇರೆ ಇಲ್ಲ ಎಂದು ಹೇಳಿದ. ಕೊನೆಗೆ ಬಿಂಬಸಾರನಂತಹ ರಾಜರಿಗೆ ಆಸೆ ದುಃಖಕ್ಕೆ ಮೂಲ ಎಂದು ತೋರಿಸಲೆತ್ನಿಸಿದ. ದೊಡ್ಡ ರಾಜರುಗಳು ಬುದ್ಧನ ಕರುಣೆಗೆ,ಸಮದರ್ಶಿತ್ವಕ್ಕೆ,ಪ್ರೀತಿಗೆ ತಲೆಬಾಗಿದರು. ಅದಾದ ಎಷ್ಟೋ ವರ್ಷಗಳ ನಂತರ ಅಶೋಕ, ಬುದ್ಧ ಹಚ್ಚಿದ ಸೊಡರನ್ನು ಹಿಡಿದು ಓಡಾಡಿದ. ಯುದ್ಧೋನ್ಮಾದಿ ರಾಷ್ಟ್ರವಾದಿಗಳು ,ಅಶೋಕ ಖಡ್ಗ ಕೆಳಗೆ ಇಳಿಸಿದ್ದನ್ನು ನಖಶಿಖಾಂತ ವಿರೋಧಿಸುತ್ತಾರೆ. ಕ್ಷಾತ್ರ ತ್ಯಾಗ ದುಬಾರಿಯಾಯಿತು ಎನ್ನುತ್ತಾರೆ. ಆದರೆ ಅವರೂ ಸಹ ವಿಶ್ವಶಾಂತಿಯ ಬಗ್ಗೆ ಮಾತನಾಡುತ್ತಾರೆ. ಮರದ ನೆರಳು ಮತ್ತು ಎದೆಯ ಪ್ರೀತಿಗಳು ಜಗತ್ತನ್ನು ಬಹುಕಾಲ ಉಳಿಸಬಲ್ಲವು ಎಂದು ಅಶೋಕ ಅರಿತುಕೊಂಡಿದ್ದ. ಇದು ಬುದ್ಧ ಪ್ರಜ್ಞೆ ದಾಟಿಸಿದ್ದ ಅರಿವು. ಈ ಅರಿವು ಸಾವಿರಾರು ಎದೆಗಳ ಆಕ್ರಂದನದ ಮೂಲಕ ಹುಟ್ಟಿತ್ತು. ನಾವು ಇಂದು ಧ್ಯಾನಿಸುತ್ತಿರುವುದು ಇದನ್ನೆ ಅಲ್ಲವೆ? ಆದರೆ ಇಂದಿನ ದೊರೆಗಳಿಗೇಕೆ ಆಕ್ರಂದನಗಳು ಕೇಳುತ್ತಿಲ್ಲ? ಶಿಲೆಯ ಬುದ್ಧನನ್ನು ಹೊತ್ತು ನಡೆವವರಿಗೆ ವಿಷದ ಹೊಳೆಯೂ ಅಮೃತ ಸಮಾನವೆ.

ರಾಜ ಪ್ರಭುತ್ವಗಳು ಉತ್ತುಂಗಕ್ಕೇರಿದರೂ ರಾಜಗೃಹ ಮುಂತಾದ ಕಡೆ ಹೆಚ್ಚು ಹೈರಾರ್ಕಿಗಳಿರಲಿಲ್ಲ ಎಂದು Karen Armstrong ಬರೆಯುತ್ತಾಳೆ. ಪೌರಾತ್ಯ ದೇಶಗಳ ಬಹುಪಾಲು ಧರ್ಮಗಳ ಬಗ್ಗೆ ತೀವ್ರವಾಗಿ ಹುಡುಕಾಡಿರುವ ಈಕೆ Buddha ಎಂಬ ಹೊತ್ತಿಗೆಯನ್ನು ಹೊತ್ತಿಸಿದ್ದಾಳೆ. ಪರಂಪರೆಯನ್ನು ಹೀಗೂ ಓದಲು ಸಾಧ್ಯ ಎಂದು ತೋರಿಸುವ ಪುಸ್ತಕ ಇದು. ಆದರೆ ಇದಕ್ಕೂ ಅಶ್ವಘೋಷನ ಮರುಳು ತುಸು ತಾಗಿದೆ.

ನನ್ನೊಳಗೆ ಇದೊಂದು ಕುತೂಹಲ ಉರಿಯುತ್ತಿದೆ ವಿ ವಿ ಗಳಲ್ಲಿರುವವರು ಯಾರಾದರೂ ಇದರ ಬೆನ್ನುಹತ್ತಿ ನೋಡಬಹುದು. ಬುದ್ದ ಭಾಷೆ ಪಾಳಿ. ಶಂಬಾ ಜೋಷಿಯವರು ಪಶುಪಾಲಕರ ಭಾಷೆ ಪಾಳಿಯಾಗಿತ್ತು,ಅದು ಯಮುನೆಯಿಂದ ಚಿತ್ರದುರ್ಗದವರೆಗೆ ಹಬ್ಬಿಕೊಂಡಿತ್ತು ಎನ್ನುತ್ತಾರೆ.ಅಶೋಕ ಸಾಂಚಿಯಿಂದ ಪೂರ್ವಭಾರತದ ಮೂಲಕ ರಾಯಚೂರು,ಕೊಪ್ಪಳ,ಚಿತ್ರದುರ್ಗದವರೆಗೆ ಶಾಸನಗಳನ್ನು ಪಾಳಿ-ಪ್ರಾಕೃತಗಳಲ್ಲಿ ಕೆತ್ತಿಸಿದ್ದನ್ನು ಷ. ಶೆಟ್ಟರ್ ವಿಶೇಷವಾಗಿ ವಿವರಿಸುತ್ತಾರೆ. ಅಂದರೆ ಭಾಷೆ ಗೊತ್ತಿದ್ದ ಪ್ರದೇಶಗಳ ಜನರ ಮಧ್ಯೆ ಅಶೋಕ ತನ್ನ ಗುರುತನ್ನು ಹೇಳಿಕೊಂಡನೆ? ಸಂವಹನ ಸಾಧ್ಯವಿದ್ದ ಕಡೆ ಸಂವಹನ ಮಾಡಿದನೆ?

ಹುಣ್ಣಿಮೆ ಮೋಹಕ. ಚಾಂದ್ರಮಾನ ಪ್ರತಿಭೆಯವರಿಗೆ ಸೋಲು ಖಚಿತ ಎನ್ನುತ್ತಾರೆ ಶಂಬಾ. ಆದರೆ ಹಗಲು ದಮನಿಸಿದ ಆಚರಣೆಗಳು ಬೆಳದಿಂಗಳಲ್ಲಿ ಜೀವತಳೆಯುತ್ತವೆ. ಬೌದ್ಧವೂ ಹೀಗೆ ತಾಂತ್ರಿಕವಾಗಿದೆ. ರಾತ್ರಿಗಳು ಮನುಷ್ಯರನ್ನು ಎಲ್ಲ ಕಡೆ ತಾರತಮ್ಯರಹಿತರನ್ನಾಗಿಸುತ್ತದೆ. ಪ್ರತಿಮಾತ್ಮಕರನ್ನಾಗಿಸುತ್ತದೆ. ಸಂಕೇತಗಳು ಯಾರಿಗೆ ಯಾವಾಗ ಮುಟ್ಟಿಸಬೇಕೊ ಆಗ ಮುಟ್ಟುತ್ತದೆ. ಅರ್ಥವಾಗಬೇಕಾದಾಗ ಅರ್ಥವಾಗುತ್ತದೆ. ಆದರೆ ಆಚರಣೆ ಆರಾಧನೆಯಾಗುತ್ತದೆ.ಆರಾಧನೆ ತರ್ಕ ರಹಿತವಾಗುತ್ತದೆ.ಆರೂಢರಲ್ಲಿ ಇದು ಇನ್ನೂ ಹೆಚ್ಚು. ಆದರೂ ಬಂಡೆ ಸಿಡಿಸಿಯೇ ಚಿನ್ನ ಹೆಕ್ಕಿಕೊಳ್ಳಬೇಕಲ್ಲವೆ?

ಅಂದ ಹಾಗೆ ಸ್ತ್ರೀಯನ್ನು ಬ್ರಹ್ಮಚರ್ಯದ ಪಾತಾಳ ಎನ್ನುತ್ತದೆ ಸುತ್ತ ಪಿಟಕ. ಇಂಥ ಹಲವು ಕಂದಕಗಳಿವೆ ಅದರಲ್ಲಿ. ಚಂದ್ರನ ಮೇಲಿನ ಕಂದಕಗಳು ಹುಣ್ಣಿಮೆಯಲ್ಲಿ ಇನ್ನೂ ಸ್ಪಷ್ಟ ಮತ್ತು ಮೋಹಕ. ಮಕ್ಕಳಲ್ಲಿ ಮೋಡಿ ಮಾಡುತ್ತವೆ. ಆದರೆ ವಾಸ್ತವ ಇಷ್ಟೊಂದು ಮೋಹಕವಾಗಿರಲು ಸಾಧ್ಯವೆ?

■




https://www.gandhiheritageportal.org/

The Gandhi Heritage Portal is an online repository of the life, work, and teachings of Mahatma Gandhi. It is an initiative of the Ministry of Culture, Government of India, and is maintained by the Sabarmati Ashram Preservation and Memorial Trust.

The portal contains a vast collection of original writings, photographs, audio and video recordings, and other documents related to Gandhi. It is a comprehensive resource for scholars, researchers, and students interested in studying Gandhi's life and philosophy.

Some of the features of the Gandhi Heritage Portal include:

- Digital archive of Gandhi's writings: The portal contains a vast collection of Gandhi's writings, including his books, articles, letters, speeches, and other documents. These writings have been digitized and are available for free access.
- Audio and video recordings: The portal also has a collection of audio and video recordings of Gandhi's speeches, interviews, and other events.
- Photographs: The portal has a large collection of photographs of Gandhi, his family, and associates, as well as photographs of events related to Gandhi's life and work.
- Videos: The portal offers video tours of important places associated with Gandhi, such as the Sabarmati Ashram, the Dandi Salt March route, and other historic sites.
- Overall, the Gandhi Heritage Portal is a valuable resource for anyone interested in learning about the life and work of Mahatma Gandhi.



(ಮೇಲಿನ ಗಾಂಧಿ ಹೆರಿಟೇಜ್ ಪೋರ್ಟಲ್ ವೀಕ್ಷಣೆಗಾಗಿ ಈ ಕೋಡ್ ಸ್ಕ್ಯಾನ್ ಮಾಡಿರಿ)

# ಪ್ರಜಾಪ್ರಭುತ್ವ ಮತ್ತು ಮತದಾನ: ಬಾಪೂ ದೃಷ್ಟಿಕೋನ

– ಕೆ. ಆರ್. ಪ್ರಸನ್ನಕುಮಾರ್



ಕರ್ನಾಟಕದಲ್ಲಿ ಇತ್ತೀಚಿಗೆ ವಿಧಾನಸಭೆಗೆ ಚುನಾವಣೆ ನಡೆಯಿತು. ಎಂದಿನಂತೆ ರಾಜಕಾರಣದ ಬಿಸಿ ಬಿಸಿ ಚರ್ಚೆ, ಆರ್ಭಟದ ಭಾಷಣ, ಪರಸ್ಪರ ದೋಷಾರೋಪಣೆಯ ಮಾತುಗಳು, ಸಾಲು ಸಾಲು ಆಮಿಷಗಳು ಎಲ್ಲ ಪಕ್ಷದವರಿಂದ ಹರಿದು ಬಂದವು. ರಾಜಕೀಯ ಪಕ್ಷದ ಪ್ರಣಾಳಿಕೆಗಳಲ್ಲಿ ರಚನಾತ್ಮಕ, ದೂರದೃಷ್ಟಿ, ಜನಪರ ಅಭಿವೃದ್ಧಿ ಅನ್ನುವುದಕ್ಕಿಂತ ಅಗ್ಗದ ಜನಪ್ರಿಯ ಯೋಜನೆಗಳೇ ಇರುವುದನ್ನು ನಾವು ನೋಡಿದ್ದೇವೆ.

ಈ ಸಂದರ್ಭದಲ್ಲಿ " ತಾಂಡವವಾಡುತ್ತಿರುವ ಭ್ರಷ್ಟಾಚಾರ ಮತ್ತು ಕಪಟ–ದ್ರೋಹಗಳು ಪ್ರಜಾಪ್ರಭುತ್ವದ ಅನಿವಾರ್ಯ ಉತ್ಪನ್ನಗಳಾಗಬಾರದು" ಎನ್ನುವ ಮಹಾತ್ಮ ಗಾಂಧಿಯವರ ಮಾತನ್ನು ನೆನಪಿಗೆ ತಂದುಕೊಳ್ಳಬೇಕಾದ ಅಗತ್ಯ ಕಾಣಿಸುತ್ತಿದೆ. ಸ್ವತಃ ಗಾಂಧೀಯೇ ಹೇಳುವ ಹಾಗೆ "ನನ್ನ ಕಲ್ಪನೆಯಲ್ಲಿ ಪ್ರಜಾಪ್ರಭುತ್ವ ಮಾದರಿ ಸರ್ಕಾರದಲ್ಲಿ ದುರ್ಬಲರು ಮತ್ತು ಬಲಿಷ್ಠರಿಗೆ ಸಮಾನವಾದ ಅವಕಾಶಗಳು ಇರುತ್ತವೆ. ಆದರೆ ಇಂದು ವಿಶ್ವದ ಬಹುತೇಕ ದೇಶಗಳು ದುರ್ಬಲರನ್ನು ಪೋಷಿಸುವ ಸ್ಥೈರ್ಯವನ್ನು ತೋರಿಸುತ್ತಿಲ್ಲ. ಆದರೆ, ಪಾಶ್ಚಿಮಾತ್ಯ ದೇಶಗಳಲ್ಲಿ ಪ್ರಜಾಪ್ರಭುತ್ವವು ಇಂದು ಕನಿಷ್ಠ 'ಫ್ಯಾಸಿಸಂ' ಧೋರಣೆಯನ್ನು ದುರ್ಬಲಗೊಳಿಸಿದೆ. ನೈಜ ಪ್ರಜಾಪ್ರಭುತ್ವದ ಕಾರ್ಯವನ್ನು ಕೇಂದ್ರೀಕೃತ ಸ್ಥಳವೊಂದರಲ್ಲಿ ಕುಳಿತು ಇಪ್ಪತ್ತು ಜನರು ಮಾಡಲು ಸಾಧ್ಯವಿಲ್ಲ. ಪ್ರತಿ ಗ್ರಾಮ ಗ್ರಾಮಗಳ ಜನರಿಂದ ತಳಮಟ್ಟದಿಂದ ಈ ಕೆಲಸಗಳಾಗಬೇಕು" ಎಂದು ಹೇಳುವ ಮೂಲಕ ಅವರು ಪ್ರಜಾಪ್ರಭುತ್ವದ ಮೂರು ಪ್ರಮುಖ ಅಂಶಗಳ ಕಡೆ ನಮ್ಮ ಗಮನ ಸೆಳೆಯುತ್ತಾರೆ.

ಮೊದಲಿಗೆ, ಸಮಾನತೆಯ ಎಳೆ ಹಿಡಿದು ಮಾತನಾಡುತ್ತಾ ದುರ್ಬಲರು ಮತ್ತು ಬಲಿಷ್ಠರ ನಡುವೆ ಯಾವುದೆ ತಾರತಮ್ಯ ಸಲ್ಲದು ಎಂದು ಹೇಳುತ್ತಾರೆ. ಸಮಾನತೆ ಎನ್ನುವುದು ಬೇರೆ ದೇಶಗಳಿಗಿಂತ ಭಾರತದ ಸಂದರ್ಭದಲ್ಲಿ ವಿಭಿನ್ನವಾದುದು. ಇಲ್ಲಿ ಸಮಾನತೆ ಎಂದರೆ ಕೇವಲ ಬಡವ-ಶ್ರೀಮಂತ ಎನ್ನುವ ಆರ್ಥಿಕ ಸಮಾನತೆ ಎಂದರ್ಥದ್ದು ಮಾತ್ರವಲ್ಲ. ಸಾಮಾಜಿಕ, ಧಾರ್ಮಿಕ, ಲೈಂಗಿಕ ಮತ್ತು ಸಾಂಸ್ಕೃತಿಕ ಸಮಾನತೆಗಳೂ ಇಲ್ಲಿ ಬಹುಮುಖ್ಯವಾಗಿ ಗಣನೆಗೆ ಒಳಗಾಗುತ್ತವೆ. ಇವೆಲ್ಲವನ್ನೂ ಪರಿಗಣಿಸಿ ಇಲ್ಲಿ ಸಮಾನತೆಯನ್ನು ಸಾಧಿಸಬೇಕಾಗುತ್ತದೆ.

ಎರಡನೆಯದಾಗಿ , ಬಾಪು ' ಫ್ಯಾಸಿಸಂ ' ಅಂದರೆ ಸರ್ವಾಧಿಕಾರಿ ಮಾದರಿಯ ಆಡಳಿತದ ವಿರುದ್ಧ ಮಾತನಾಡಿದ್ದಾರೆ. ಅದರರ್ಥ ಪ್ರಜಾಪ್ರಭುತ್ವದಲ್ಲಿ ಏಕಚಕ್ರಾಧಿಪತ್ಯ ಎಂದಿಗೂ ಸಲ್ಲದು ಎಂದು ಎಚ್ಚರಿಕೆ ನೀಡುತ್ತಾರೆ.

ಮೂರನೆಯದಾಗಿ ,ಪ್ರಜಾಪ್ರಭುತ್ವದಲ್ಲಿ ಯಾವುದೊ ಸ್ಥಳವೊಂದರಲ್ಲಿ ಯಾರದೋ ನಾಯಕತ್ವದ ಮೊದಲ ಸಾಲಿನ ಸೀಮಿತ ಸಂಖ್ಯೆಯ ಜನ ಸೇರಿ ಆಡಳಿತದ ರೂಪುರೇಷೆಗಳನ್ನು ನಿರ್ಧರಿಸಿ ಎಲ್ಲವನ್ನೂ ಕೇಂದ್ರೀಕೃತಗೊಳಿಸುವುದಲ್ಲ. ಅಂತಹ ಪ್ರಕ್ರಿಯೆಯಲ್ಲಿ ದೇಶದ ಪ್ರತಿ ಭಾಗದ ಮತ್ತು ಸಮಾಜದ ಎಲ್ಲ ಸ್ತರದ ವ್ಯಕ್ತಿಗಳೂ ಭಾಗಿಯಾಗಿ ತೀರ್ಮಾನಗಳು ಸಾರ್ವತ್ರಿಕವಾಗಿರುವಂತೆ ನೋಡಿಕೊಳ್ಳಬೇಕು. ಆಗ ಮಾತ್ರ ನೈಜ ಮಾದರಿಯ ಪ್ರಜಾಪ್ರಭುತ್ವದ ಆಶಯಗಳನ್ನು ಕಾಣಲು ಸಾಧ್ಯ.

ಬಾಪು ಮತದಾನದ ವಿಷಯವಾಗಿ ಮಾತನಾಡುತ್ತಾ ಪಕ್ಷದ ಧೋರಣೆಗಳಿಗಿಂತ ಅಭ್ಯರ್ಥಿಯ ಚಾರಿತ್ರ್ಯ ಬಹಳ ಮುಖ್ಯ ಎಂಬುದನ್ನು ಪ್ರಮುಖವಾಗಿ ಪ್ರತಿಪಾದಿಸುತ್ತಾರೆ. "ಚಾರಿತ್ರ್ಯವಂತ ವ್ಯಕ್ತಿಯು ತನಗೆ ನೀಡಿದ ಯಾವುದೇ ಸ್ಥಾನಕ್ಕೆ ಅರ್ಹನಾಗುತ್ತಾನೆ. ಅವನ ತಪ್ಪುಗಳು ಸಹ ಹೆಚ್ಚು ಮುಖ್ಯವಲ್ಲ. ಚಾರಿತ್ರ್ಯವಿಲ್ಲದ ವ್ಯಕ್ತಿ ಉನ್ನತ ರಾಷ್ಟ್ರಸೇವೆ ಮಾಡುವುದು ಅಸಾಧ್ಯವೆಂದು ನಾನು ಭಾವಿಸುತ್ತೇನೆ, ಹಾಗಾಗಿ ನಾನು ಪಟ್ಟಿಯಿಂದ ಮತದಾರನಾಗಿದ್ದರೆ, ನಾನು ಮೊದಲು ಚಾರಿತ್ರ್ಯವಂತ ಪುರುಷರನ್ನು ಆಯ್ಕೆ ಮಾಡುತ್ತೇನೆ" ಎಂಬುದನ್ನು ಸ್ಪಷ್ಟವಾಗಿ ಹೇಳುತ್ತಾರೆ. ಶತಮಾನಗಳ ಕಾಲ ವಿದೇಶಿಯರ ಅಧಿನದಲ್ಲಿದ್ದ ದೇಶವೊಂದನ್ನು ಸ್ವತಂತ್ರಗೊಳಿಸುವ ದಿಸೆಯ ಹೋರಾಟದಲ್ಲಿ ಅಗ್ರಗಣ್ಯ ಪಾತ್ರ ವಹಿಸಿದ್ದ ಬಾಪು ಪ್ರಜಾಪ್ರಭುತ್ವ ಮತ್ತು ಅದರ ಅಡಿಪಾಯವಾದ ಚುನಾವಣೆಯ ಕುರಿತು ಕಂಡಿದ್ದ ಕನಸು ಅತ್ಯಂತ ಆದರ್ಶಪ್ರಾಯವಾದುದ್ದು. ಆದರೆ ಇಂದು ರಾಜಕೀಯ ಪಕ್ಷಗಳಿಗಾಗಲಿ ಅಥವಾ ರಾಜಕಾರಣದಲ್ಲಿ ತೊಡಗಿಕೊಂಡವರಿಗಾಗಲಿ ಜನಕಲ್ಯಾಣದ ಮೂಲಕ ರಾಜ್ಯ ಮತ್ತು ದೇಶವನ್ನು ಅಭಿವೃದ್ಧಿಯ ಪಥದಲ್ಲಿ ಮುನ್ನಡೆಸುವ ಹಿತಾಸಕ್ತಿಗಿಂತ ತಮ್ಮ ಪ್ರತಿಷ್ಠೆ, ಅಧಿಕಾರ ಚಲಾವಣೆ, ದರ್ಪ, ಭ್ರಷ್ಟಾಚಾರಗಳಲ್ಲಿ ತೊಡಗಿಕೊಳ್ಳುವುದೇ ಮುಖ್ಯ ಉದ್ದೇಶವಾಗಿದೆ.

## ಮಕ್ಕಳಿಗಾಗಿ ಗಾಂಧಿ ಕತೆ



# ಗಾಂಧಿ ಮತ್ತು ಮಾರ್ಟಿನ್ ಲೂಥರ್ ಕಿಂಗ್ ಜ್ಯೂನಿಯರ್

ಗಾಂಧೀಜಿಯವರನ್ನು ಭೇಟಿಯಾಗದೆಯೆ ಅವರಿಂದ ಪ್ರಭಾವಿತರಾದ ಅದೆಷ್ಟೋ ನಾಯಕರು ವಿಶ್ವದಾದ್ಯಂತ ಇದ್ದಾರೆ. ಗಾಂಧೀಜಿಯವರು ಅನ್ವೇಷಿಸಿದ ಸತ್ಯಾಗ್ರಹವನ್ನು ತಮ್ಮ ಹೋರಾಟದ ಅಸ್ತ್ರವನ್ನಾಗಿ ಮಾಡಿಕೊಂಡಿದ್ದಾರೆ. ಅಂಥವರಲ್ಲಿ ಯು. ಎಸ್. ಎ. ಯ ಮಾನವ ಹಕ್ಕುಗಳ ಹೋರಾಟಗಾರ ಮಾರ್ಟಿನ್ ಲೂಥರ್ ಕೂಡ ಒಬ್ಬರು. ಆಫ್ರಿಕನ್ ಅಮೇರಿಕನ್ನರ ಹಕ್ಕುಗಳಿಗಾಗಿ ಅವರು ನಿರಂತರ ಹೋರಾಟವನ್ನು ಚಾಲನೆಯಲ್ಲಿಟ್ಟಿದ್ದರು.

ಮಾರ್ಟಿನ್ ಗಾಂಧೀಜಿಯವರ ಅಹಿಂಸಾತ್ಮಕ ಹೋರಾಟದ ಬಗ್ಗೆ ಒಲವುಳ್ಳವರಾಗಿದ್ದರು. ಅಹಿಂಸೆಯೆಂದರೆ ನಮ್ಮ ವೈರಿಗಳನ್ನು ಹಿಂಸೆಗೆ ಒಳಪಡಿಸದಿರುವುದು ಮಾತ್ರವಲ್ಲ, ಅವರನ್ನು ಪ್ರೀತಿಸುವುದು ಕೂಡಾ ಎಂದು ಅವರು ಹೇಳುತ್ತಿದ್ದರು. ಸುಳ್ಳನ್ನು ವಿರೋಧಿಸಬೇಕು, ಅದನ್ನು ಆಚರಿಸುವವನನ್ನಲ್ಲ, ಸತ್ಯಕ್ಕಾಗಿ ಆಗ್ರಹಿಸಬೇಕು, ಆದರೆ ಪ್ರೀತಿಯಿಂದಲೇ ಅದನ್ನು ಮಾಡಬೇಕು ಎಂಬುದನ್ನು ಅವರು ಕಂಡುಕೊಂಡರು. ಗಾಂಧೀಜಿಯವರ ಅಹಿಂಸೆಯ ನಡೆಯನ್ನು ಯೇಸುವಿನ ಕ್ಷಮಾಗುಣದೊಂದಿಗೆ ಬೆಸುಗೆ ಹಾಕಿ ಅವರು ತಮ್ಮ ಹೋರಾಟದ ಹಾದಿಗಳನ್ನು ರೂಪಿಸಿದರು. 1955-56ರಲ್ಲಿ ಬಸ್ ಬಾಯ್ಕಾಟ್ ಚಳುವಳಿ ನಡೆಸುವಾಗ ಪೂರ್ಣವಾಗಿ ಹೋರಾಟವನ್ನು ಗಾಂಧಿಮಾರ್ಗದಲ್ಲಿ ಸಂಘಟಿಸಿದರು. ಆಫ್ರಿಕನ್ನರು ಬಸ್ ಗಳ ಹಿಂದಿನ ಸೀಟುಗಳಲ್ಲಿ ಮಾತ್ರ ಪ್ರಯಾಣಿಸಬೇಕುಬ ಸರಕಾರದ ನಿಲುವನ್ನು ಪ್ರೀತಿಯಿಂದಲೇ ನಿರಾಕರಿಸಿದರು.

1959ರಲ್ಲಿ ಅವರು ಗಾಧೀಜಿಯವರ ಹೋರಾಟದ ಬಗೆಗೆ ಅಧ್ಯಯನ ಮಾಡಲೆಂದು ಭಾರತ ಪ್ರವಾಸವನ್ನು ಕೈಗೊಂಡರು. ಗಾಂಧೀಜಿಯವರ ಮನೆ, ಸಂಬಂಧಿಕರು, ಸ್ನೇಹಿತರನೇಕರನ್ನು ಭೇಟಿಯಾದರು. ದೇಶಕ್ಕೆ ಮರಳಿದ ಮೇಲೆ ಅವರು ಬರೆದ ಮಾತುಗಳು ಸತ್ಯಾಗ್ರಹದ ಹಿರಿಮೆಯನ್ನು ಸಾರುತ್ತವೆ.

"ಅಹಿಂಸೆಯಿಂದ ಸ್ವಾತಂತ್ರ್ಯ ಪಡೆಯುವುದರ ಮಹತ್ವವೇನೆಂದು ನಾನು ಭಾರತ ಪ್ರವಾಸದಲ್ಲಿ ಕಂಡುಕೊಂಡೆ. ವಸಾಹತುಶಾಹಿಯಿಂದ ತಮ್ಮನ್ನು ಬಂಧಿಸಿದ ಇಂಗ್ಲೀಷರ ಬಗ್ಗೆ ದ್ವೇಷ ಭಾವನೆಯನ್ನು ನಾನು ಭಾರತೀಯರಲ್ಲಿ ಗಮನಿಸಲಿಲ್ಲ. ಸತ್ಯ ಮತ್ತು ನ್ಯಾಯಕ್ಕಾಗಿ ಪ್ರೀತಿ ಮತ್ತು ಅಹಿಂಸೆಯಿಂದ ಆಗ್ರಹಿಸುವ ಹೋರಾಟದ ಫಲಶ್ರುತಿಯಂತೆ ಇದು ನನಗೆ ಕಾಣಿಸಿತು"

ಅಹಿಂಸೆಯ ವಿಜಯಕ್ಕೆ ಬರೆದ ಭಾಷ್ಯದಂತಿದೆ ಇದು.

**ಸಂಗ್ರಹ : ಸುಧಾ ಅಡುಕುಳ**

PIETERMARITZBURG GANDHI FOUNDATION

GMK 2023

UNIVERSITY OF KWAZULU-NATAL
INYUVESI YAKWAZULU-NATALI
HUMANITIES INSTITUTE



MAHATMA GANDHI, NELSON MANDELA & MARTIN LUTHER KING JR.

INTERNATIONAL CONFERENCE

PEACE AND JUSTICE FOR ALL

Mobilizing for Nonviolent Change (Ahimsa)

06th - 09th JUNE 2023

PIETERMARITZBURG, SOUTH AFRICA

In view of the thought, values, practices and histories, of these icons, and leader-intellectuals of the 20th century, the call is to critically and constructively reflect, conceptualize, and mobilize for nonviolent peaceful change in a violent world. For this purpose, the conference will bring together world-renowned academics, intellectuals, activists, and critical scholars

ಪೀಟರ್ ಮ್ಯಾರಿಟ್ ಬರ್ಗ್ ಗಾಂಧಿ ಫೌಂಡೇಶನ್ , ನಟಾಲ್ ನ ಕ್ವಾಜುಲು ಯೂನಿವರ್ಸಿಟಿ , ಇಂಡಿಯಾದ ಗಾಂಧಿ ಕಿಂಗ್ ಫೌಂಡೇಶನ್ ಮತ್ತು ಯು ಎಸ್ ಎ ದ ಸಪ್ನಾ ಫೌಂಡೇಶನ್ ಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ " ಗಾಂಧಿ ಮಂಡೇಲಾ ಕಿಂಗ್ ಅಂತರ ರಾಷ್ಟ್ರೀಯ ಸಮ್ಮೇಳನ " ದಕ್ಷಿಣ ಆಫ್ರಿಕಾದಲ್ಲಿ ಜೂನ್ 6 ರಿಂದ 9 ರವರೆಗೆ ನಡೆಯಲಿದೆ . ಇದು ಈ ಅಂತರ ರಾಷ್ಟ್ರೀಯ ಸಮ್ಮೇಳನ ಸರಣಿಯ ಎರಡನೇ ಸಮ್ಮೇಳನ. ಮೊದಲ ಸಮ್ಮೇಳನ 2019 ರಲ್ಲಿ ಅಮೇರಿಕಾದ ಸ್ಟ್ಯಾನ್ಫೋರ್ಡ್ ವಿಶ್ವ ವಿದ್ಯಾಲಯದಲ್ಲಿ ನಡೆದಿತ್ತು .

ಭಾರತದ ವಕೀಲ ಮೋಹನ ದಾಸ ಕರಮ್ ಚಂದ್ ಗಾಂಧಿಯವರನ್ನು  ಪೀಟರ್ ಮ್ಯಾರಿಟ್ ಬರ್ಗ್ ನಿಲ್ದಾಣದಲ್ಲಿ 1893 ರ ಜೂನ್ 7 ರಂದು ಪ್ರಥಮ ದರ್ಜೆ ಬೋಗಿಯಿಂದ ಆಚೆಗೆ ದಬ್ಬಲಾಗಿತ್ತು .ಅವರ ಬಳಿ ಪ್ರಥಮ ದರ್ಜೆ ಟಿಕೆಟ್ ಇದ್ದರೂ ಸಹ ಅವರು ಕಪ್ಪು ವರ್ಣಿಯರು ಎನ್ನುವ ಕಾರಣದಿಂದ ದಕ್ಷಿಣ ಆಫ್ರಿಕಾದ ಬಿಳಿಯರ ಆಡಳಿತ ಅವರನ್ನು ಅವಮಾನ ಪಡಿಸಿತ್ತು. ಈ ಘಟನೆಯು ಗಾಂಧಿಯವರ ಹೋರಾಟಕ್ಕೆ ನಾಂದಿಯಾದದ್ದು ಮತ್ತು ಗಾಂಧೀಜಿ ವಿಶ್ವಖ್ಯಾತಿ ಗಳಿಸಿ ಮಹಾತ್ಮ ಗಾಂಧೀಜಿ ಆದದ್ದು ಈಗ ಇತಿಹಾಸ.

ಮೋಹನ ದಾಸ ಕರಮ್ ಚಂದ ಗಾಂಧಿ ದಕ್ಷಿಣ ಆಫ್ರಿಕಾದ ವರ್ಣಬೇಧ ನೀತಿಯ ಕರಾಳ ಆಡಳಿತಕ್ಕೆ ತುತ್ತಾದ ಈ  ಅಪೂರ್ವ ಘಟನೆಯ ಸ್ಮರಣಾರ್ಥ ಪೀಟರ್ ಮ್ಯಾರಿಟ್ ಬರ್ಗ್ ನಗರದಲ್ಲಿಯೇ ಈ ಅಂತರ ರಾಷ್ಟ್ರೀಯ ಸಮ್ಮೇಳನವನ್ನು ನಡೆಸಲಾಗುತ್ತಿದೆ. ಈ ಸಂದರ್ಭದಲ್ಲಿ ದೆಹಲಿಯ ಗಾಂಧಿ ಮ್ಯೂಸಿಯಂ ಸಂಸ್ಥೆಯು  ಗಾಂಧಿ ಕುರಿತ ಒಂದು ಫೋಟೋ ಪ್ರದರ್ಶವನ್ನು ಈ  ಸಮ್ಮೇಳನ ಸಂದರ್ಭದಲ್ಲಿ ಅಲ್ಲಿಯೇ ಏರ್ಪಡಿಸುತ್ತಿದೆ.



# Arun Manilal Gandhi My Nomad Father

*-Tushar Gandhi*

Born to Sushila and Manilal Gandhi, at Phoenix Ashram outside Durban in the Natal province of South Africa on 14th April 1934 Arun was the second of their three children, their only son. Arun grew up on the Phoenix Settlement established by his grandfather Mohandas Gandhi.

He grew up learning farming and the production of the weekly publication started by his grandfather, The Indian Opinion.

Upon the death of his father, in 1955, Arun came to India carrying his funeral ashes for immersion in the holy Triveni Sangam at Allahabad. On this visit, Arun suffered an acute attack of appendicitis and was operated upon in the Harkisondas Hospital in Bombay. Here Arun met and fell in love with his nurse Sunanda Ambegaonkar. They married and Arun began life in India. Arun joined Times of India and worked there as a Journalist, Information Officer and Editor of the Directory and Year Book and Who's Who of India. After working at Times of India for 22 years Arun joined Imprint magazine as its Editor. Arun also wrote as a stringer for the Argus News Paper in South Africa and the Winnipeg Free Press in Canada. In 1965-66 Arun took Sunanda to London for a spinal operation. They had to live there for 9 months. After Sunanda recovered they travelled to South Africa to join their Children Archana and Tushar who were living with their grand mother Sushila at the Phoenix Ashram. The family returned to India.

In the decade of '70s Arun and Sunanda engaged in many social activities and organisations working for the betterment of the rural poor, they also helped find good adoptive homes for over a hundred orphan girls and boys in India, France and Sweden. During this time Arun and Sunanda travelled extensively in Europe. In 1983 Arun was offered a 18 month fellowship to study Racism in the US. They returned to India in 1984.

In 1984 Arun launched a locality weekly 'The Suburban Echo' catering to the Western Suburbs of Bombay. He had to close it down due to financial constraints in 1986. Arun and Sunanda moved to the US in 1986 and lived the rest of their lives there. Initially in Oxford, Mississippi, then in Memphis, Tennessee and finally in Rochester New York. Arun established the M. K. Gandhi Institute for Non-violence in Memphis and then in 2007 he moved it to Rochester.

Sunanda passed away in February 2007 while in India. Arun lived in Rochester, NY till 2023 and spread his grandfather's message of non-violence and peace throughout the Americas, Europe, Asian and African countries.

Arun's health deteriorated in 2021 and slowly worsened during the Covid Pandemic. He arrived in India in the beginning of February 2023 in very poor health. He had made up his mind to shift to India and settle in Kolhapur at the Sunanda Gandhi Girl's Home he helped establish. He arrived at the Girl's Home on 28th February, but his health steadily declined and his end came in the early dawn of 2nd May 2023. Arun was cremated on the farmland at Washi village on the outskirts of Kolhapur on the evening of 2nd May, where his family will build a boys home and a skill education school in his memory.

The boy born and raised on a farm who crisscrossed the globe throughout out his life, finally merged into the soil of a farm.

Rest in peace my dear beloved father.



# Ba-Bapuji

You can not reach Bapuji
if not started from Ba.
And there is the big sea of tolerance in
between Ba and Bapuji
The rippling waves of love and sacrifice
raising from the depth of black sea
is salty more than the dead sea itself
One self merged by two selves to make a
small boat
And that marked the great voyage to the
magic island of Truth
When Bapu received all of the beat Ba
wriggled with pain
When Bapu bore the extreme grief Ba
burst into tears
Thus, languishing in the great voyage Ba
melted in Bapu
and Bapuji came out. When Bapu was
revered without Ba
Where did Ba stand apart from Bapuji ?

**I V. S. Gireeshan**



# KARL MARX BIRTH ANNIVERSARY & BUDDA POORNIMA

May 5th is Buddha Poornima and also the birth anniversary of Karl Marx. Burton Russell in an interview had said only Marx had the potential to be a philosopher of the 20th century. He had no love lost for Marx but was committed to objective truth by and large. Marx is the only global giant intellectually and humanistically who keeps dying everyday according to his detractors. Poor fellow, some want him to die but are always disappointed that he does not oblige.

The working people shall not abandon him and scientific theories survive onslaughts. Regards to the man who revolutionised thinking, action and the thinking process. Just think of how many scientists, not to speak of multitudes of others, who believed in him and accepted his analytical judgments: Bernal G.H. Hardy Haldane Joliot Curie D.D. Kosambi Debiprasad Needham ... and a thousand others.

Today especially the world needs his guidance and scientific analysis. Buddha and Marx are beacons for all time. My warmest regards to them. To both of them let us humbly say 'SharaNam Gacchaami'. Here ' sharanam ' is togetherness of equals.

**Dr. G Ramakrishna**
Sanskrit scholar & communist activist






ಮಹಾತ್ಮ ಗಾಂಧೀಜಿಯವರ ಮೊಮ್ಮಗ ಅರುಣ್ ಗಾಂಧಿಯವರ ನಿಧನಕ್ಕೆ
ಗಾಂಧಿ ಭವನದಲ್ಲಿ ಗೌರವ ಕಾರ್ಯದರ್ಶಿ ಇಂದಿರಾ ಕೃಷ್ಣಪ್ಪ ಅವರ ನೇತೃತ್ವದಲ್ಲಿ ನಮನ.



ಸ್ವಾತಂತ್ರ್ಯ ಹೋರಾಟಗಾರ ಡಾ. ನಾ. ಸು. ಹರ್ಡೇಕರ್‌ಅವರ 134ನೇ ಜನ್ಮದಿನದ ನಿಮಿತ್ತ ಬೆಂಗಳೂರಿನ ಕುಮಾರಕೃಪಾ
ರಸ್ತೆಯಲ್ಲಿರುವ ಹರ್ಡೇಕರ್ ಪ್ರತಿಮೆಗೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ. ವೂಡೇ ಪಿ. ಕೃಷ್ಣ ಮಾಲಾರ್ಪಣೆ ಮಾಡಿದರು.




ಟಿ ದಾಸರಹಳ್ಳಿ ಸರ್ಕಾರೀ ಪ್ರಥಮ ದರ್ಜೆ ಕಾಲೇಜಿನ ಎನ್ ಎಸ್ ಎಸ್ ವಿಶೇಷ ವಾರ್ಷಿಕ ಶಿಬಿರಕ್ಕೆ ಸ್ವಂತ ಆಸಕ್ತಿಯಿಂದ ಆಗಮಿಸಿ ವಿದ್ಯಾರ್ಥಿಗಳ ಜೊತೆ ವಿಧಾನಪರಿಷತ್ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಮಾತುಕತೆ ನಡೆಸಿದರು.





ಟಿ ದಾಸರಹಳ್ಳಿ ಸರ್ಕಾರೀ ಪ್ರಥಮದರ್ಜೆ ಕಾಲೇಜು ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ನಡೆದ ವಿಶೇಷ ವಾರ್ಷಿಕ ಎನ್ ಎಸ್ ಎಸ್ ಶಿಬಿರದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷರಾದ ವೂಡೇ ಪಿ ಕೃಷ್ಣ , ಸದಸ್ಯರುಗಳಾದ ಜಿ ಬಿ ಶಿವರಾಜ್, ಎಂ ಸಿ ನರೇಂದ್ರ, ಕಾಲೇಜಿನ ಪ್ರಿನ್ಸಿಪಾಲ್ ಡಾ . ಪ್ರಸಾದ್ ಸ್ವಾಮಿ ,ಶಿಬಿರದ ನಿರ್ದೇಶಕಿ ಹಾಗೂ ಗಾಂಧಿ ಸ್ಮಾರಕ ನಿಧಿ ಸದಸ್ಯೆ ಅಬಿದಾ ಬೇಗಂ ಭಾಗವಹಿಸಿದ್ದರು .

# ಪದಬಂಧ-05



ಅ.ನಾ.ಪ್ರಹ್ಲಾದರಾವ್

**ಎಡದಿಂದ ಬಲಕ್ಕೆ**

1. ಶಾಲೆಯಲ್ಲಿ ಮೋಹನದಾಸ ತಪ್ಪಾಗಿ ಬರೆದಿದ್ದ ಪದ. ಗೊತ್ತಾಗದಿದ್ದರೆ 'ಕೆಟಲ್ ' ನೆನಪಿಸಿಕೊಳ್ಳಿ (3)
2. ಇಂಗ್ಲೆಂಡಿನಲ್ಲಿ ಗಾಂಧಿ ಅವರಿಗೆ ದೊರೆತ ಮಿತ್ರ (5)
4. ಇವರ ಕಡೆಗೆ ಕಣ್ಣೆತ್ತಿಯೂ ನೋಡುವುದಿಲ್ಲ ಎಂದು ತಾಯಿಗೆ ಭಾಷೆ ನೀಡಿದ ಬಾಪೂ (3)
6. ಗಾಂಧಿ ವರ್ಜಿಸಿದ ಪ್ರಾಣಿಪಕ್ಷಿಗಳಿಂದ ತಯಾರಿಸಿದ ಆಹಾರ (4)
9. ಸರಸ – ವಿರಸದ ಸಮನ್ವಯವೇ ಜೀವನ (4)
11. ಇದು ಗಾಂಧೀಜಿ ಜನಿಸಿದ ರಾಜ್ಯ (4)
13. ವೈನವಾಗಿರುವ ಅತ್ತಿಗೆ ತಿರುಗಿದಳು (2)
15. ಭವಿಷ್ಯದ ಒಳಿತಿಗಾಗಿ ಕೂಡಿಡುವ ಪ್ರವೃತ್ತಿ (4)
17. ನಾಟಕದಲ್ಲಿ ಸರಿಸುವ ಪರದೆ (2)
18. ಶಾಖ ಜೋಡಿಸಿದರೆ ಗಾಂಧಿಪ್ರಿಯ ಈ ಆಹಾರ ಸಿದ್ಧ (4)

**ಮೇಲಿಂದ ಕೆಳಕ್ಕೆ**

1. ಹಮಾಲಿಗೆ ಹಾಕಿದ ಹಾರ ತಿರುಗಿದೆ (3)
3. ಕನ್ನಡ ನಾಡಿನಿಂದ ದಿಲ್ಲಿಗೆ ಹೋಗಿ ಪ್ರಧಾನಮಂತ್ರಿಗಳಾದವರ ಜಿಲ್ಲೆ ತಿರುಗಿದೆ (3)
3. ಇವು ಜಲಮೂಲ ಸಂಸ್ಕೃತಿಯ ಜೀವನಾಡಿಗಳು (2)
5. ಇದನ್ನು ಪಾಲನೆ ಮಾಡದಿದ್ದರೆ ಯಮ ಬರುತ್ತಾನೆ (3 )
7. ಅನುಕ್ರಮವಾಗಿ ಒಬ್ಬರ ಹಿಂದೆ ಒಬ್ಬರು ನಿಲ್ಲಿ (3)
8. ಹಣ ದುಂದು ಮಾಡದೆ ಗಾಂಧಿ ಅನುಸರಿಸಿದ ಉಳಿತಾಯ ಶೈಲಿ (4)
9. ಗಾಂಧಿ ಜೀವನದ ವಿರಳತೆಯ ಸರಳ ಶೈಲಿ (4)
10. ಜನಿಸಿದಾಗ ಕವಿದಿದ್ದ ಕತ್ತಲೆ (3)
12. ಇಂಗ್ಲೆಂಡ್ ಈ ವಸ್ತ್ರ ಉದ್ಯಮಕ್ಕೆ ಹೆಸರಾಗಿತ್ತು (3)
14. ಭಾರತೀಯ ಋತುಮಾನದಲ್ಲಿ ಚೈತ್ರದ ಮುಂದಿನ ಮಾಸ (3)
15. ಪ್ರಶ್ನೆಗೆ ಉತ್ತರವೂ ಹೌದು ; ದಿಕ್ಕು ಹೌದು (3)
16. ಕೆಂಪು ವರ್ಣದ ಲೋಹ (2)

## ಉತ್ತರ : ಪದಬಂಧ – 4

| | | | | | | | | |
|---|---|---|---|---|---|---|---|---|
| 1 ಮೋ | 2 ಹ | ನ | 3 ದಾ | ಸ | ■ | 4 ರ | ■ | 5 ಕ |
| ■ | ರಿ | ■ | ಸ್ಯ | ■ | ■ | ಹೀ | ■ | ಸ್ತೂ |
| ■ | ಶ್ಚಂ | ■ | ■ | 6 ಸು | 7 ದಾ | ಮ | ಪು | ರಿ |
| ■ | 8 ದ್ರ | 9 ವ | ■ | ■ | ವಂ | ■ | ■ | ಬಾ |
| 10 ಕ | ■ | ಡೋ | ■ | 11 ಪು | ತ | ಲಿ | 12 ಬಾ | ಯಿ |
| ರ | ■ | 13 ದ | ಮ | ನ | ■ | ■ | ಲ್ಯ | ■ |
| 14 ಮ | ತ್ಸ | ರ | ■ | ಹ | ■ | 15 ಕ | ವಿ | ತೆ |
| ಚಂ | ■ | ■ | 16 ಭ | ■ | ■ | ■ | ವಾ | ■ |
| 17 ದ | ಯಾ | ಮ | ಯ | ■ | 18 ಮ | ಳೆ | ಹ | ನಿ |

ಪದಬಂಧ–5 ರ ಉತ್ತರ ಮುಂದಿನ ಸಂಚಿಕೆಯಲ್ಲಿ.

**ಬಲಿಷ್ಠತೆ ಎನ್ನುವುದು ನಿಮ್ಮ ದೈಹಿಕ ಸಾಮರ್ಥ್ಯದಿಂದ ಬರುವಂಥದಲ್ಲ; ಅದು ಅದಮ್ಯ ಅಂತಃಶಕ್ತಿಯಿಂದ ಬರುವಂಥದ್ದು.**

